WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಜನವರಿ ೫, ೨೦೧೨ (ಪುಷ್ಯ ೧೫, ಶಕ ವರ್ಷ ೧೯೩೩) | ಸಂಚಿಕೆ ೧ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ಪಿ. ಪ್ರಸಾದ್, ಪಿ.ಐ., ಪೊಲೀಸ್ ನಿಯಂತ್ರಣ ಕೊಠಡಿ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು, ಇವರ ಆದೇಶ ಸಂಖ್ಯೆ : 72/ಡಿ.ಇ.1/ಆರ್–6/2009, ದಿನಾಂಕ : 15–06–2010.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)27/2010–11, ದಿನಾಂಕ: 30–09–2010.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 20–11–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)27/ 2010–11,ದಿನಾಂಕ: 07–03–2011.

**ಪ್ರಸ್ತಾವನೆ:**

ಶ್ರೀ ಬಿ.ಪಿ. ಪ್ರಸಾದ್, ಇವರು ಬೆಂಗಳೂರಿನ ಆರ್.ಟಿ. ನಗರ ಪೊಲೀಸ್ ಠಾಣೆಯಲ್ಲಿ ಪಿ.ಐ., ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದುರ್ನಡತೆ, ಅಶಿಸ್ತು, ಕರ್ತವ್ಯಲೋಪವೆಸಗಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಬಿ.ಪಿ.ಪ್ರಸಾದ್, ಪಿ.ಐ., ಆದ ನೀವು ಆರ್.ಟಿ.ನಗರ ಪೊಲೀಸ್ ಠಾಣೆ, ಬೆಂಗಳೂರು ನಗರ ಇಲ್ಲಿ ಠಾಣಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಅರ್ಜಿದಾರರಾದ ಶ್ರೀಮತಿ ಯಶಸ್ವಿನಿ, ತ್ಯಾಗರಾಜನಗರ, ಬೆಂಗಳೂರು ರವರು ಆರ್.ಟಿ. ನಗರ ವಾಸಿಯಾದ ಶ್ರೀ ಶ್ಯಾಮಸುಂದರ್ ಎಂಬುವವರಿಂದ ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ ರಾಗಿಹಳ್ಳಿಯಲ್ಲಿ ಅವರಿಗೆ ಸೇರಿದ ಜಮೀನನ್ನು ಕೊಂಡುಕೊಳ್ಳಲು 30 ಲಕ್ಷಕ್ಕೆ ಕರಾರು ಮಾಡಿಕೊಂಡು ದಿನಾಂಕ : 23–02–2007 ರಂದು ಮುಂಗಡವಾಗಿ ರೂ. 26 ಲಕ್ಷ ಹಣ ಪಾವತಿ ಮಾಡಿರುತ್ತಾರೆ. ಆದರೆ, ಸದರಿ ಜಮೀನು ರಕ್ಷಿತ ಅರಣ್ಯಕ್ಕೆ ಸೇರಿರುವುದರಿಂದ ನೋಂದಾವಣೆ ಮಾಡಲು ಸಾಧ್ಯವಿಲ್ಲ ಎಂದು ತಿಳಿದಾಗ ಅರ್ಜಿದಾರರು ತಾವು ಕೊಟ್ಟ ಹಣವನ್ನು ವಾಪಸ್ ಕೊಡಬೇಕೆಂದು ಶ್ರೀ ಶ್ಯಾಮಸುಂದರ್ ರವರಿಗೆ ಕೇಳಿದ್ದು ಶ್ಯಾಮಸುಂದರ್ ರವರು ಅವರ ಭಾವಮೈದುನರೊಂದಿಗೆ ಅರ್ಜಿದಾರಳಿಗೆ ಪ್ರಾಣ ಬೆದರಿಕೆ ಹಾಕಿದ್ದರಿಂದ ಈ ವಿಷಯದಲ್ಲಿ ಸೂಕ್ತ ನ್ಯಾಯ ಮತ್ತು ರಕ್ಷಣೆಗಾಗಿ ಶ್ರೀಮತಿ ಯಶಸ್ವಿನಿ ರವರು ನಿಮ್ಮನ್ನು ಭೇಟಿ ಮಾಡಿದ್ದು, ಈ ಅವಕಾಶವನ್ನು ಬಳಸಿಕೊಂಡ ನೀವು ಅರ್ಜಿದಾರರ ತಂದೆ ದಿನಾಂಕ : 07–07–2009 ರಂದು ಮರಣ ಹೊಂದಿದ ಮೂರನೇ ದಿನ ಅರ್ಜಿದಾರರ ಮೊಬೈಲ್‌ಗೆ ಫೋನು ಮಾಡಿ ರಾತ್ರಿ 10 ರಿಂದ 11 ಗಂಟೆಯವರೆಗೆ ಮಾತನಾಡಿ "ಏನಿಲ್ಲ ಮೇಡಂ, ನನ್ನ ಹೆಂಡತಿ ಊರಲ್ಲಿಲ್ಲ, ನಾನು ನಿಮ್ಮ ಮನೆಗೆ ಬರಬೇಕು, ಏಕಾಂತವಾಗಿ ಇರಬೇಕು ಎಂದು ಇಚ್ಛಿಸುತ್ತೇನೆ, ನಿಮಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳುತ್ತೇನೆ. ನಿಮ್ಮ ಮಗ ನನಗೂ ಮಗನಿದ್ದಂತೆ, ನಿಮ್ಮ ಜೀವನ ಹಾಳು ಮಾಡಿಕೊಳ್ಳಬೇಡಿ, ನನ್ನ ಪಾಡಿಗೆ ಬರುತ್ತೇನೆ, ಹೋಗುತ್ತೇನೆ, ನಿಮ್ಮ ಮನೆಗೆ ಒಬ್ಬ ಪೊಲೀಸ್ ಅಧಿಕಾರಿ

ಬಂದು ಹೋದರೆಂದರೆ, ನಿನಗೆ ಹೆಚ್ಚು ಗೌರವ ಸಿಗುತ್ತದೆ, ಅಕ್ಕಪಕ್ಕದ ಹುಡುಗರು ಯಾರು ಕಣ್ಣು ಹಾಕುವುದಿಲ್ಲ, ನಾವಿಬ್ಬರೂ ಖುಷಿಯಾಗಿರೋಣ, ನಾನು ಎಲ್ಲರನ್ನೂ ಇಷ್ಟ ಪಡುವುದಿಲ್ಲ ನನಗೆ ಒಂದು ಛಾನ್ಸ್ ಕೊಡುತ್ತೀರಾ, ನಿಮ್ಮ ಆಹ್ವಾನಕ್ಕೆ ಕಾಯುತ್ತಿರುತ್ತೇನೆ" ಎಂದು ಹೇಳಿ ಅರ್ಜಿದಾರರಿಗೆ ಲೈಂಗಿಕ ಕಿರುಕುಳ ನೀಡಿರುತ್ತೀರಿ. ಈ ರೀತಿ ಒಬ್ಬ ಜವಾಬ್ದಾರಿಯುತ ಠಾಣಾಧಿಕಾರಿಯಾದ ನೀವು ನಿಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಅರ್ಜಿದಾರರ ಸಮಸ್ಯೆಯ ಅವಕಾಶವನ್ನು ನಿಮ್ಮ ಲೈಂಗಿಕ ತೃಪ್ತಿಗಾಗಿ ಬಳಸಿಕೊಳ್ಳಲು ಪ್ರಯತ್ನಿಸಿ, ಸಮಾಜದಲ್ಲಿ ಸಾರ್ವಜನಿಕರ ನೆಮ್ಮದಿಯ ಜೀವನಕ್ಕೆ ಅವಕಾಶ ಮಾಡಿಕೊಡುವ ಜವಾಬ್ದಾರಿಯುತ ಅಧಿಕಾರಿಯಾದ ನೀವು ಸೂಕ್ತ ನೀತಿ, ನಿಯಮ ಕಾಪಾಡುವ ಶಿಸ್ತಿನ ಇಲಾಖೆಯಲ್ಲಿದ್ದು, ಸದರಿ ಅರ್ಜಿದಾರರಿಗೆ ಲೈಂಗಿಕ ಕಿರುಕುಳ ನೀಡಿ, ದುರ್ನಡತೆ, ಅಶಿಸ್ತು, ಅಸಭ್ಯತೆಯನ್ನು ಪ್ರದರ್ಶಿಸಿ, ಗಂಭೀರ ಸ್ವರೂಪದ ಕರ್ತವ್ಯಲೋಪವೆಸಗಿ, ಪೊಲೀಸ್ ಇಲಾಖೆಗೆ ತರವಲ್ಲದ ರೀತಿಯನ್ನು ನಡೆದುಕೊಂಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 15–06–2010ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಎರಡು ವರ್ಷಗಳ ಕಾಲ ಮುಂಡೂಡಲಾಗಿದೆ. ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತಿನ ಅವಧಿಯಲ್ಲಿ ಪಡೆದ ಜೀವನಾಧಾರದ ಭತ್ಯೆಗೆ ಸೀಮಿತಗೊಳಿಸಿ ಆದೇಶಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 30–09–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅಶಿಸ್ತು, ದುರ್ನಡತೆ ಹಾಗೂ ಗಂಭೀರ ಸ್ವರೂಪದ ಕರ್ತವ್ಯಲೋಪ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 176 ಪೊಸಿಅ 2010, ಬೆಂಗಳೂರು, ದಿನಾಂಕ: 28–10–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಪಿ. ಪ್ರಸಾದ್, ಪಿ.ಐ., ಪೊಲೀಸ್ ನಿಯಂತ್ರಣ ಕೋಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 2634

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಟಿ. ರಾಜಪ್ಪ ಮಾಜಿ ಪಿ.ಸಿ., ದಾವಣಗೆರೆ ಗ್ರಾಮಾಂತರ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರ ಆದೇಶ ಸಂಖ್ಯೆ : ಸಿಬ್ಬಂದಿ(5)/ಇವಿ/4/2003 (ಓ.ಬಿ. ಸಂಖ್ಯೆ : 38/2004–05) ದಿನಾಂಕ : 01–06–2004.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 6/ಅಪೀಲು/2004–05 (ಓ.ಬಿ. ಸಂಖ್ಯೆ : 187/2004–05) ದಿನಾಂಕ: 07–03–2005.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 04–02–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)86/2009–10, ದಿನಾಂಕ: 02–02–2011.

**ಪ್ರಸ್ತಾವನೆ:**

ಶ್ರೀ ಟಿ.ರಾಜಪ್ಪ ಇವರು ದಾವಣಗೆರೆ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅತೀವ ದುರ್ನಡತೆ ಪ್ರದರ್ಶನ ಮಾಡಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಆಪಾದಿತರಾದ ಸಿ.ಪಿ.ಸಿ.–438, ಶ್ರೀ ಟಿ.ರಾಜಪ್ಪ, ದಾವಣಗೆರೆ ಗ್ರಾಮಾಂತರ ಪೊಲೀಸ್ ಠಾಣೆ ಆದ ನೀವು ಶ್ರೀಮತಿ ಟಿ.ಹೆಚ್. ಹನುಮಂತಮ್ಮ ಕೋಂ ಹಾಲಪ್ಪ, ವಾಸ : ಹೊನ್ನೂರು ಗ್ರಾಮ, ದಾವಣಗೆರೆ ತಾಲ್ಲೂಕು, ರವರ ಮಗಳಾದ ಕುಮಾರಿ ನಾಗರತ್ನಮ್ಮ ಎಂಬುವವರನ್ನು ಮದುವೆಯಾಗುವುದಾಗಿ ಹಿರಿಯರ ಸಮಕ್ಷಮ ಮಾತುಕತೆ ನಡೆಸಿ 80 ಸಾವಿರ ರೂಪಾಯಿಗಳನ್ನು ವರದಕ್ಷಿಣೆಯಾಗಿ ಪಡೆದು ನಂತರ ನಿಮಗೆ ಪಿ.ಎಸ್.ಐ. ಹುದ್ದೆ ಸಿಗುವುದರಲ್ಲಿದೆ ಅದಕ್ಕಾಗಿ ಪುನಃ 5 ಲಕ್ಷ ರೂಪಾಯಿ ಗಳನ್ನು

ಕೊಟ್ಟರೆ ಮದುವೆಯಾಗುವುದಾಗಿ ಇಲ್ಲವಾದರೆ ಮದುವೆಯಾಗುವುದಿಲ್ಲ ಎಂದು ತಿಳಿಸಿ ನೀವು ಈಗಾಗಲೇ ಪಡೆದಿರುವ ವರದಕ್ಷಿಣೆ ಹಣ 80 ಸಾವಿರ ರೂಪಾಯಿಗಳನ್ನು ವಾಪಸ್ ಕೊಡದೆ ಶ್ರೀಮತಿ ಟಿ.ಹೆಚ್. ಹನುಮಂತಮ್ಮ ಮತ್ತು ಅವರ ಮಗಳಿಗೆ ಮೋಸ ಮಾಡಿದ್ದಲ್ಲದೇ ಶಿಸ್ತಿನ ಇಲಾಖೆಯಲ್ಲಿರುವ ನೀವು ಅತೀವ ದುರ್ನಡತೆಯನ್ನು ಪ್ರದರ್ಶನ ಮಾಡಿರುತ್ತೀರಾ ಅಂತ ಆಪಾದನೆ ಇರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 01-06-2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ. ದಿನಾಂಕ : 11-05-2003 ರಿಂದ ಈ ಆದೇಶ ಹೊರಡಿಸಿದ ದಿನಾಂಕದವರೆಗಿನ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 07-03-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 29 ಪೊಸಿಅ 2010, ಬೆಂಗಳೂರು, ದಿನಾಂಕ: 28-10-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ. ರಾಜಪ್ಪ ಮಾಜಿ ಪಿ.ಸಿ., ದಾವಣಗೆರೆ ಗ್ರಾಮಾಂತರ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 2635

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ಕೆ. ರಾಜೇಶ್, ಪಿ.ಸಿ. ಸೋಮವಾರ ಪೇಟೆ, ಪೊಲೀಸ್ ಠಾಣೆ, ಕುಶಾಲನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೊಡಗು ಜಿಲ್ಲೆ, ಇವರ ಆದೇಶ ಸಂಖ್ಯೆ: ಡಿಇ/08/07-08 (ಓ.ಬಿ. 77/09-10) ದಿನಾಂಕ: 04-12-09.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/70/2009-10 (ಓ.ಬಿ. 5/2010-11) ದಿನಂಕ: 27-4-10.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 03-08-10.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)/46/10-11 ದಿನಾಂಕ: 23-09-2010.
5. ಕಾರಣ ಕೇಳುವ ನೋಟೀಸ್ ಸಂಖ್ಯೆ: ಒಇ 134 ಪೊಸಿಅ 2010 ದಿನಾಂಕ: 26-05-2011.
6. ಅರ್ಜಿದಾರರ ಸಮಜಾಯಿಷಿ ದಿನಾಂಕ: 05-07-2011.
7. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 106 ಸಿಎನ್ಎಸ್ 11 ದಿನಾಂಕ: 04-10-2011.

**ಪ್ರಸ್ತಾವನೆ:**

ಶ್ರೀ ಬಿ.ಕೆ. ರಾಜೇಶ್, ಪಿ.ಸಿ. ಸೋಮವಾರ ಪೇಟೆ ಪೊಲೀಸ್ ಠಾಣೆ, ಕುಶಾಲನಗರ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅಶಿಸ್ತು, ದುರ್ನಡತೆ ಹಾಗೂ ಕ್ರಿಮಿನಲ್ ಮೊಕದ್ದಮೆ ದಾಖಲಾಗಲು ಕಾರಣಕರ್ತರಾಗಿದ್ದರಿಂದ ಇನ್ನೋರ್ವ ಸಿಬ್ಬಂದಿಯೊಂದಿಗೆ (ಪತ್ನಿ) ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರೊಂದಿಗೆ 8 ರಡಿ ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಡಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಬಿ.ಕೆ. ರಾಜೇಶ್, ಸಿ.ಪಿ.ಸಿ.-88, ಆದ ನೀವು ಆ.ಪೊ.ಅ.2 ರವರಾದ ಶ್ರೀಮತಿ ಕತೀಜ, ಮ.ಪಿ.ಸಿ. ರವರನ್ನು ದಿನಾಂಕ: 06-06-1999 ರಲ್ಲಿ ಹಿಂದೂ ಪದ್ಧತಿಯಂತೆ ವಿವಾಹವಾಗಿದ್ದು, ಈಕೆಯೊಂದಿಗೆ ಸಂಸಾರ ನಡೆಸುತ್ತಿದ್ದು, ದಿನಾಂಕ: 09-05-2004 ರಂದು ಅಮ್ಮತ್ತಿ ಒಂಟಿಯಂಗಡಿಯ ದಿ: ಪೂವಪ್ಪನವರ ಪುತ್ರಿ ಹರಿಣಿ ಎಂಬುವವರನ್ನು ಮಡಿಕೇರಿ ಮೈತ್ರಿ ಭವನದಲ್ಲಿ ವಿವಾಹವಾಗಿರುತ್ತೀರಿ. ಶ್ರೀಮತಿ ಹರಿಣಿಯೊಂದಿಗೆ ಶನಿವಾರಸಂತೆ ಪೊಲೀಸ್ ವಸತಿಗೃಹ ಮತ್ತು ಕುಶಾಲನಗರದ

ಶ್ರೀಮತಿ ಗೀತಾರವರ ಬಾಬ್ತು ಬಾಡಿಗೆ ಮನೆಯಲ್ಲಿ ವಾಸವಿದ್ದ ಸಂದರ್ಭದಲ್ಲಿ ಆ.ಪೊ.ಅ.2 ರವರೊಂದಿಗೆ ಸಂಬಂಧವಿಟ್ಟುಕೊಂಡು, ನಿಮ್ಮ ಪತ್ನಿ ಹರಿಣಿಯವರಿಗೆ ದೈಹಿಕ ಹಾಗೂ ಮಾನಸಿಕ ಹಿಂಸೆ ನೀಡಿದುದಲ್ಲದೆ, ಕಾರು ಖರೀದಿಸಲು ತವರು ಮನೆಯಿಂದ ವರದಕ್ಷಿಣೆಯಾಗಿ ರೂ. 50,000/– ತರುವಂತೆ ಕಿರುಕುಳ ನೀಡುತ್ತಿದ್ದು. ಹರಿಣಿಗೆ ತವರಿನಿಂದ ಕೊಟ್ಟ 8 ಪವನಿನ ಚಿನ್ನಾಭರಣವನ್ನು ಕಿತ್ತುಕೊಂಡು ಅಡಮಾನವಿಟ್ಟಿರುವುದಾಗಿಯೂ, ನಂತರ ನೀವು ಮತ್ತು ನಿಮ್ಮ ತಾಯಿ ಶ್ರೀಮತಿ ಪಾರ್ವತಿಯವರು ಸೇರಿ ಹರಿಣಿಯನ್ನು ಮನೆಯಿಂದ ಹೊರಗೆ ಹಾಕಿದುದಲ್ಲದೆ ಆಕೆಯ 2 1/2 ವರ್ಷ ಪ್ರಾಯದ ಮಗುವನ್ನು ಕಿತ್ತುಕೊಂಡು ತಾಯಿ ಮತ್ತು ಮಗುವನ್ನು ಬೇರ್ಪಡಿಸಿದ್ದು, ಈ ಸಂಬಂಧವಾಗಿ ಶ್ರೀಮತಿ ಹರಿಣಿಯವರು ವಿರಾಜಪೇಟೆ ಗ್ರಾಮಾಂತರ ಠಾಣೆಯಲ್ಲಿ ನೀಡಿದ ದೂರಿನಂತೆ ನಿಮ್ಮ ವಿರುದ್ಧ ಮೊ.ಸಂ.171/07 ಕಲಂ 498(ಎ) 506 ರೆ/ವಿ 34 ಐಪಿಸಿ ಯಂತೆ ಪ್ರಕರಣ ದಾಖಲಾಗಿರುವುದಾಗಿದೆ. ಈ ಸಂಬಂಧ ನೀವು ಅಮಾನತ್ತುಗೊಂಡು, ಅಮಾನತ್ತಿನಲ್ಲಿದ್ದ ಅವಧಿಯಲ್ಲಿ ದಿನಾಂಕ: 24–10–2007 ರಂದು ನೀವು ಸುರೇಶ ಎಂಬುವರೊಂದಿಗೆ ಹರಿಣಿಯ ತಂದೆಯ ಮನೆಗೆ ಅಕ್ರಮ ಪ್ರವೇಶ ಮಾಡಿ, ಹರಿಣಿ, ಆಕೆಯ ತಾಯಿ ಮತ್ತು ಮಾವನವರನ್ನು ಕೊಲೆ ಮಾಡುವ ಉದ್ದೇಶದಿಂದ ಆಸಿಡ್ ಎರಚಲು ಪ್ರಯತ್ನಿಸಿದ್ದು, ಸದ್ರಿ ಆಸಿಡ್ ತಗಲಿ ಹರಿಣಿಯ ಮಾವ ಬಾಲಪ್ಪನವರ ಕೈಬೆರಳಿಗೆ ಸುಟ್ಟಗಾಯವಾಗಿದ್ದು. ನಂತರ ನೀವು ಚಾಕುವಿನಿಂದ ಬಾಲಪ್ಪನವರಿಗೆ ತಿವಿಯಲು ಪ್ರಯತ್ನಿಸಿದ್ದು, ಈ ಸಂಬಂಧ ಶ್ರೀಮತಿ ಹರಿಣಿಯವರು ವಿರಾಜಪೇಟೆ ಗ್ರಾಮಾಂತರ ಪೊಲೀಸ್ ಠಾಣೆಗೆ ನೀಡಿದ ದೂರಿನ ಮೇರೆಗೆ ಮೊ.ಸಂ. 203/07 ಕಲಂ 448.307.506.114 ರೆ/ವಿ 34 ಐಪಿಸಿಯಂತೆ ಕೇಸು ದಾಖಲಾಗಿರುವುದಾಗಿದೆ. ನೀವು ಶಿಸ್ತಿನ ಇಲಾಖೆಯಲ್ಲಿದ್ದು, ಕಾನೂನನ್ನು ರಕ್ಷಣೆ ಮಾಡಬೇಕಾದ ನೀವೇ ಕಾನೂನು ವಿರುದ್ಧವಾಗಿ ನಡೆದುಕೊಂಡು, ಅಶಿಸ್ತು ಮತ್ತು ದುರ್ನಡತೆ ಪ್ರದರ್ಶಿಸಿ, ಇಲಾಖೆಯ ಗೌರವಕ್ಕೆ ಚ್ಯುತಿ ತಂದಿರುವುದಿಲ್ಲದೆ, ಕ್ರಿಮಿನಲ್ ಮೊಕದ್ದಮೆ ದಾಖಲಾಗಲು ಕಾರಣಕರ್ತರಾಗಿರುತ್ತೀರಿ ಎಂಬುದು ನಿಮ್ಮ ಮೇಲಿನ ಆರೋಪವಾಗಿರುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣಾ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು ಕೊಡಗು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 04–12–2009ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ 3 ವರ್ಷಗಳ ಕಾಲ ತಡೆಹಿಡಿಯಲಾಗಿದೆ ಅನಧಿಕೃತವಾಗಿ ಗೈರುಹಾಜರಾದ ಅವಧಿ ದಿ: 24–10–2007 ರಿಂದ 29–11–07 ರವರೆಗಿನ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 106(ಎ) ಪ್ರಕಾರ ವೇತನರಹಿತ ರಜೆಯೆಂದು ದಿನಾಂಕ: 30–11–2007 ರಿಂದ 03–08–2008 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 27–04–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶ್ರೀಮತಿ ಖತೀಜ ಎಂಬುವವರನ್ನು ಮದುವೆಯಾಗಿದ್ದು, ಮೊದಲನೆ ಪತ್ನಿ ಇರುವಾಗಲೇ ಶ್ರೀಮತಿ ಹರಿಣಿ ಎಂಬುವವರನ್ನು ಎರಡನೇ ಮದುವೆ ಮಾಡಿಕೊಂಡು ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು, 1966ರ ಉಪಬಂಧಗಳನ್ನು ಉಲ್ಲಂಘಿಸಿರುತ್ತಾರೆ. ಈ ಕುರಿತು ಅರ್ಜಿದಾರರಿಗೆ ಶಿಸ್ತು ಪ್ರಾಧಿಕಾರವು ವಿಧಿಸಿರುವ ದಂಡನೆಯನ್ನು ಹೆಚ್ಚಿಸುವ ಕುರಿತಂತೆ ಉಲ್ಲೇಖ (5) ರಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಗಿತ್ತು. ಅರ್ಜಿದಾರರು ನೀಡಿದ ಉಲ್ಲೇಖ (6)ರ ಸಮಜಾಯಿಷಿಯನ್ನು ಪರಿಶೀಲಿಸಿ ಸಮಜಾಯಿಷಿಯಲ್ಲಿ ಪರಿಗಣಿಸುವ ಅಂಶಗಳು ಇಲ್ಲದಿರುವುದರಿಂದ ಓದಲಾದ (7)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 134 ಪೊಸಿಅ 2010, ಬೆಂಗಳೂರು, ದಿನಾಂಕ: 28–10–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಕೆ. ರಾಜೇಶ್, ಪಿ.ಸಿ. ಸೋಮವಾರ ಪೇಟೆ ಪೊಲೀಸ್ ಠಾಣೆ, ಕುಶಾಲನಗರ, ಇವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ, ಇವರು ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 24–10–2007 ರಿಂದ 29–11–2007ರ ವರೆಗಿನ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 106(ಎ) ರನ್ವಯ ವೇತನ ರಹಿತ ರಜೆಯೆಂದು ದಿನಾಂಕ: 30–11–2007 ರಿಂದ ದಿನಾಂಕ 03–08–2008ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 2636

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಆಶೀರ್ವಾದಂ, ಆರ್.ಎಸ್.ಐ. (ನಿವೃತ್ತ) ಸಿ.ಎ.ಆರ್. (ಕೇಂದ್ರ) ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಜಂಟಿ ಪೊಲೀಸ್ ಆಯುಕ್ತರು (ಆಡಳಿತ) ಸಿ.ಎ.ಆರ್. ಬೆಂಗಳೂರು, ಇವರ ಆದೇಶ ಸಂಖ್ಯೆ: ಡಿಇ/65/ಆರ್.6/2002 ದಿನಾಂಕ: 22–05–2004.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು, ಇವರ ಆದೇಶ ಸಂಖ್ಯೆ: 10/ಅಪೀಲು/02/2004 ದಿನಂಕ: 07–03–11.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 07–05–11.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)/14/2011–12 ದಿನಾಂಕ: 16–07–2011.

**ಪ್ರಸ್ತಾವನೆ:**

ಶ್ರೀ ಆಶೀರ್ವಾದಂ ರವರು ಬೆಂಗಳೂರಿನ ಸಿ.ಎ.ಆರ್. (ಕೇಂದ್ರ) ಘಟಕದಲ್ಲಿ ಆರ್.ಎಸ್.ಐ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯಲೋಪ ಮಾಡಿರುವ ಆರೋಪದ ಮೇಲೆ ಇತರೇ 8 ಸಿಬ್ಬಂದಿಗಳೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ಮತ್ತು 8 ರೊಂದಿಗೆ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಆರೋಪಿತ ಪೊಲೀಸ್ ಅಧಿಕಾರಿಗಳಾದ ಶ್ರೀ ಆಶೀರ್ವಾದಂ, ಆರ್.ಎಸ್.ಐ.,ವೈ.ಎಸ್. ಮಂಜುನಾಥ, ಹೆಚ್.ಸಿ.643, ಅಂತೋಣಿ ಸೋಬರ್ ಎಪಿಸಿ–1735, ಎಸ್. ಜಗದೀಶ್ ಎಪಿಸಿ 1441, ಆಂಜನಮೂರ್ತಿ, ಎಪಿಸಿ–3001, ಆರ್. ರಂಗನಾಥ್ ಎಪಿಸಿ–2999, ಸಿ. ರಘು, ಎಪಿಸಿ 1978, ಟಿ. ಕೃಷ್ಣ ಎಪಿಸಿ 2068, ಬಿ.ಎನ್. ಸುರೇಶ್ ಎಪಿಸಿ–2994 ಆದ ನೀವುಗಳು ಸಿ.ಎ.ಆರ್.(ಕೇಂದ್ರ) ಘಟಕದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 04–04–2002 ರಂದು ನಿಮ್ಮನ್ನು ಕೇಂದ್ರ ಕಾರಾಗೃಹದಿಂದ 15 ಜನ ವಿಚಾರಣಧೀನ ಖೈದಿಗಳನ್ನು ಭದ್ರತೆಗಳೊಂದಿಗೆ ಕರೆದುಕೊಂಡು ಹೋಗಿ ನಗರದ 1ನೇ ಎಸಿಎಂಎಂ ನ್ಯಾಯಾಲಯಕ್ಕೆ ಹಾಜರುಪಡಿಸಿ, ನಂತರ ಕೇಂದ್ರ ಕಾರಾಗೃಹಕ್ಕೆ ಖೈದಿಗಳನ್ನು ವಾಪಸ್ಸು ಬಿಡುವಂತೆ ಕರ್ತವ್ಯ ನೇಮಕ ಮಾಡಿ, ನಿಮ್ಮ ಸುರಕ್ಷತೆಯ ಬಗ್ಗೆ ಹಾಗೂ ಆರೋಪಿಗಳನ್ನು ಕರೆದುಕೊಂಡು ಹೋಗಲು ಅಗತ್ಯವಾದ ಹ್ಯಾಂಡ್‌ಕಪ್ಸ್, ಲೀಡಿಂಗ್ ಚೈನ್, ಶಸ್ತ್ರಗಳು ಹಾಗೂ ವಾಹನದ ವ್ಯವಸ್ಥೆ ಮಾಡಿದ್ದರೂ ಸಹ ನೀವುಗಳು ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆ ತೋರಿದ ಕಾರಣ ದಿನಾಂಕ: 04–04–2002 ರಂದು ಮಧ್ಯಾಹ್ನ ಸುಮಾರು 2–15ರ ಸಮಯದಲ್ಲಿ ಆರೋಪಿಯಾದ ಜಮೀಲ್ ಅಲಿಯಾಸ್ ಖಂಡ್ರೆ ಯು.ಟಿ. ನಂ. 2454 ಎಂಬ ವಿಚಾರಣಾ ಖೈದಿಯು ನೀವು ಕುಳ್ಳಿರಿಸಿದ್ದ ವಾಹನ ಸಂಖ್ಯೆ: ಕೆ.ಎ. 01 ಜಿ.10 ಇದರ ಚಾಲಕನ ಹತ್ತಿರ ಇರುವ ಬಾಗಿಲಿನಿಂದ ತಪ್ಪಿಸಿಕೊಂಡು ಓಡಿ ನ್ಯಾಯಾಲಯದ ಮೊದಲನೆ ಮಹಡಿ ಹತ್ತಿರ ಜಿಗಿದು ಕಬ್ಬನ್‌ಪಾರ್ಕ್ ಕಡೆ ಪರಾರಿಯಾಗಿದ್ದು, ನೀವು ಈತನನ್ನು ಹಿಡಿಯದೇ ಹಾಗೂ ತಪ್ಪಿಸಿಕೊಳ್ಳಲು ಅವಕಾಶ ಮಾಡಿಕೊಟ್ಟು ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯಲೋಪವನ್ನುಂಟು ಮಾಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು (ಆಡಳಿತ) ಸಿ.ಎ.ಆರ್. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 22–05–2004ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು 2 ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಮುಂದೂಡಲಾಗಿದೆ. ನಂತರ ಇವರು ಮುಂದಿನ ವೇತನ ಬಡ್ತಿಗಳನ್ನು ಈ ಶಿಕ್ಷೆಗಿಂತ ಮುಂಚೆ ಪಡೆಯುತ್ತಿದ್ದ ವೇತನ ಹಂತದಿಂದ ವಾರ್ಷಿಕ ವೇತನ ಬಡ್ತಿಗಳನ್ನು ಪಡೆಯುವುದು ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 07–03–2011ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 47 ಪೊಸಿಅ 2011, ಬೆಂಗಳೂರು, ದಿನಾಂಕ: 28–10–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆಶೀರ್ವಾದಂ ಆರ್.ಎಸ್.ಐ. (ನಿವೃತ್ತ), ಸಿ.ಎ.ಆರ್. (ಕೇಂದ್ರ) ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 2637

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಎಲ್. ಗೌಡರ, ಮಾಜಿ ಪಿ.ಸಿ., ಟಿಳಕವಾಡಿ ಪೊಲೀಸ್ ಠಾಣೆ, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ಇವಿ/14/2004 (ಓ.ಬಿ. ಸಂಖ್ಯೆ: 600/2005) ದಿನಾಂಕ: 04–07–2005.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/50/ಉವ/2010 ದಿನಾಂಕ: 04–11–10.
3. ಅರ್ಜಿದಾರನ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 26–11–10.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)74/2010–11 ದಿನಾಂಕ: 31–03–2011.

**ಪ್ರಸ್ತಾವನೆ:**

ಶ್ರೀ ಎಸ್.ಎಲ್. ಗೌಡರ, ಇವರು ಬೆಳಗಾವಿಯ ಟಿಳಕವಾಡಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯ ನಿರ್ಲಕ್ಷತೆ ಹಾಗೂ ದುರ್ನಡತೆಯ ಆರೋಪದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಆ.ಪೊ.ಅ. ಸಿಪಿಸಿ ಬ.ನಂ. 2378 ಎಸ್.ಎಲ್. ಗೌಡರ, ಟಿಳಕವಾಡಿ ಪೊಲೀಸ್ ಠಾಣೆ, ಬೆಳಗಾವಿ, ರವರಾದ ನಿಮಗೆ ಮಾನ್ಯ ಎಸ್.ಪಿ., ಸಾಹೇಬರು ಬೆಳಗಾವಿ ರವರ ಆದೇಶ ಸಂ. ಇಎಸ್‌ಟಿ:1:ಜಿಟಿ:104:2003, ದಿನಾಂಕ: 31–05–2003 ನೇದ್ದರ ಅಡಿಯಲ್ಲಿ ನಿಪ್ಪಾಣಿ ಗ್ರಾಮೀಣ ಪೊಲೀಸ್ ಠಾಣೆಯಿಂದ ಟಿಳಕವಾಡಿ ಪೊಲೀಸ್ ಠಾಣೆ, ಬೆಳಗಾವಿಗೆ ವರ್ಗ ಮಾಡಿದಂತೆ ನಿಮಗೆ ದಿನಾಂಕ: 23–06–2003 ರಂದು ನಿಪ್ಪಾಣಿ ಗ್ರಾಮೀಣ ಪೊಲೀಸ್ ಠಾಣೆಯಿಂದ ಬಿಡುಗಡೆ ಮಾಡಿ ಟಿಳಕವಾಡಿ ಪೊಲೀಸ್ ಠಾಣೆ, ಬೆಳಗಾವಿಯಲ್ಲಿ ಕರ್ತವ್ಯಕ್ಕೆ ಹಾಜರ್ ಆಗಲು ಸೂಚಿಸಿ ಕಳಿಸಿದ್ದು ನೀವು ಟಿಳಕವಾಡಿ ಪೊಲೀಸ್ ಠಾಣೆ ಬೆಳಗಾವಿಯಲ್ಲಿ ಹಾಜರ್ ಆಗದೇ ಅನಧೀಕೃತವಾಗಿ ಗೈರುಹಾಜರ್ ಉಳಿದು ದಿನಾಂಕ: 07–05–2004 ರಂದು 17.30 ಗಂಟೆಗೆ ಕರ್ತವ್ಯಕ್ಕೆ ಹಾಜರ್ ಆಗಿರುತ್ತೀರಿ. ನೀವು ದಿನಾಂಕ: 23–06–2003 ರಿಂದ 07–05–2004ರ ವರೆಗೆ ಕರ್ತವ್ಯಕ್ಕೆ ಅನಧೀಕೃತವಾಗಿ ಗೈರಹಾಜರ್ ಉಳಿದಿದ್ದು ನಿಮ್ಮ ಕರ್ತವ್ಯದಲ್ಲಿ ಘೋರ ವಿಮುಖತೆ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 04–07–2005ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ. ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 23–06–2003 ರಿಂದ 07–05–2004 ರವರೆಗೆ ಒಟ್ಟು 320 ದಿನಗಳನ್ನು ಸಂಬಳರಹಿತ ರಜೆಯೆಂದು ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 04–11–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ಘೋರ ವಿಮುಖತೆ ಹಾಗೂ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 178 ಪೊಸಿಅ 2010, ಬೆಂಗಳೂರು, ದಿನಾಂಕ: 28–10–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎಲ್. ಗೌಡರ, ಮಾಜಿ ಪಿ.ಸಿ., ಟಿಳಕವಾಡಿ ಪೊಲೀಸ್ ಠಾಣೆ, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 2638

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿಂ.ನಾ. ಗರುಡಾಚಾರ್, ನಿವೃತ್ತ ಪೊಲೀಸ್ ಮಹಾ ನಿರ್ದೇಶಕರು ಹಾಗೂ ಮಹಾನಿರೀಕ್ಷಕರು, ಕರ್ನಾಟಕ ರಾಜ್ಯ ಹಾಗೂ ಅವರ ಪತ್ನಿ ಶ್ರೀಮತಿ ವತ್ಸಲಾ ಗರುಡಾಚಾರ್ ರವರ ಹೆಸರಿನಲ್ಲಿ ರೂ. 10,000/–ಗಳ ನಗದು ಬಹುಮಾನ ನೀಡುವ ಬಗ್ಗೆ.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : ಆರ್.ಎಲ್.ಎನ್.(2)1/2011–12 ದಿನಾಂಕ : 05–05–2011.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯದಿಂದ ಭಾರತೀಯ ಪೊಲೀಸ್ ಸೇವೆಗೆ ಆಯ್ಕೆಯಾದವರಲ್ಲಿ ಶ್ರೀ ಬಿಂ.ನಾ.ಗರುಡಾಚಾರ್ ಮತ್ತು ಶ್ರೀ ಚಲ್ಲಪ್ಪರವರು ಮೊದಲಿಗರಾಗಿರುತ್ತಾರೆ. ರಾಜ್ಯದ ನಾನಾ ಜಿಲ್ಲೆಗಳಲ್ಲಿ ಜಿಲ್ಲಾ ಪೊಲೀಸ್ ಅಧಿಕಾರಿಯಾಗಿ, ಉಪ ಮಹಾ ನಿರ್ದೇಶಕರಾಗಿ, ಬೆಂಗಳೂರು ನಗರದ ಪೊಲೀಸ್ ಕಮೀಷನರ್ ಆಗಿ ಹಾಗೂ 1983 ರಿಂದ 1986 ರವರೆಗೆ ಪೊಲೀಸ್ ಇಲಾಖೆಯ ಆರಕ್ಷಕ ಮಹಾ ನಿರ್ದೇಶಕ ಹಾಗೂ ಮಹಾ ನಿರೀಕ್ಷಕರಾಗಿ ಸೇವೆಯನ್ನು ಸಲ್ಲಿಸಿರುತ್ತಾರೆ. ಇವರ ನಿವೃತ್ತಿಯ ನಂತರ ಸರ್ಕಾರವು 1994ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಪ್ರಧಾನ ಮಾಡಿ ಗೌರವಿಸಿದೆ. ಸದರಿಯವರು ಪೊಲೀಸ್ ಇಲಾಖೆಯಿಂದ ನಿವೃತ್ತರಾಗಿ 25 ವರ್ಷಗಳಾಗಿರುವುದರಿಂದ ಇಲಾಖೆಯಲ್ಲಿ ಸೇವೆ ಸಲ್ಲಿಸಿದ ನೆನಪಿಗಾಗಿ ಪ್ರತಿ ವರ್ಷ ಪೊಲೀಸ್ ತರಬೇತಿ ಕಾಲೇಜಿನಿಂದ ಪ್ರಪ್ರಥಮವಾಗಿ ಉತ್ತೀರ್ಣರಾಗುವ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಅಧಿಕಾರಿಗೆ ದೀಕ್ಷಾಂತ ಸಮಾರೋಹ (Passing out Parade) ದಿನದಂದು ರೂ. 10,000/–ಗಳ ನಗದು ಬಹುಮಾನವನ್ನು "ನಿವೃತ್ತ ಪೊಲೀಸ್ ಮಹಾನಿರ್ದೇಶಕ ಹಾಗೂ ಮಹಾನಿರೀಕ್ಷಕರಾದ ಶ್ರೀ ಬಿಂ.ನಾ. ಗರುಡಾಚಾರ್, ಹಾಗೂ ಅವರ ಧರ್ಮಪತ್ನಿ ಶ್ರೀಮತಿ ವತ್ಸಲಾ ಗರುಡಾಚಾರ್ ಬಹುಮಾನ" ಎಂಬ ಹೆಸರಿನಲ್ಲಿ ನೀಡಲು ಬಯಸಿರುತ್ತಾರೆ ಹಾಗೂ ಇದಕ್ಕಾಗಿ ರೂ. 1.00 ಲಕ್ಷ ರೂಪಾಯಿಗಳನ್ನು ಕೆ.ಪಿ.ಎ. ನಿರ್ದೇಶಕರ ಹುದ್ದೆಯ ಹೆಸರಿನಲ್ಲಿ ಶಾಶ್ವತ ಅವಧಿ ಠೇವಣಿಯಲ್ಲಿಡಲು (Permanent Fixed Deposit) ನಿರ್ಧರಿಸಿರುವುದಾಗಿ ಮೇಲೆ ಓದಲಾದ ಪತ್ರದಲ್ಲಿ ಡಿಜಿಪಿ ರವರು ವಿವರಿಸಿರುತ್ತಾರೆ.

ಕರ್ನಾಟಕ ರಾಜ್ಯ ಪೊಲೀಸ್ ಇಲಾಖೆಯು ಅತ್ಯುತ್ತಮವಾಗಿ ಕೆಲಸ ಮಾಡುತ್ತಿದ್ದು, ಈ ಇಲಾಖೆಗೆ ಸೇರುವ ಅಭ್ಯರ್ಥಿಗಳಿಗೆ ಸೇವಾ ಮನೋಭಾವ ಹಾಗೂ ರಾಜ್ಯದ ರಕ್ಷಣಾ ಜಾಗೃತಿ ಹೆಚ್ಚಿಸುವ ಸದುದ್ದೇಶದಿಂದ ಈ ಬಹುಮಾನವನ್ನು ನೀಡಲು ಬಯಸಿರುವುದಾಗಿ ವಿವರಿಸಲಾಗಿದೆ. ನಿವೃತ್ತ ಪೊಲೀಸ್ ಮಹಾನಿರ್ದೇಶಕರು ಹಾಗೂ ಮಹಾನಿರೀಕ್ಷಕರಾದ ಶ್ರೀ ಬಿಂ.ನಾ. ಗರುಡಾಚಾರ್ ರವರ ಮನವಿಯನ್ನು ಪುರಸ್ಕರಿಸಿ ಕರ್ನಾಟಕ ಪೊಲೀಸ್ ಅಕಾಡೆಮಿ, ಮೈಸೂರು ಹಾಗೂ ಪೊಲೀಸ್ ತರಬೇತಿ ಕಾಲೇಜು ಗುಲ್ಬರ್ಗಾದಲ್ಲಿ ಏಕಕಾಲದಲ್ಲಿ ನಡೆಯುವ ನಾಗರೀಕ ಪಿ.ಎಸ್.ಐ. (Civil PSI) ತರಬೇತಿಯಲ್ಲಿ ಪ್ರಪ್ರಥಮವಾಗಿ ಉತ್ತೀರ್ಣರಾಗುವ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಅಧಿಕಾರಿಗೆ ದೀಕ್ಷಾಂತ ಸಮಾರೋಹ (Passing out Parade) ದಿನದಂದು ರೂ. 10,000/–ಗಳ ನಗದು ಬಹುಮಾನವನ್ನು "ನಿವೃತ್ತ ಪೊಲೀಸ್ ಮಹಾನಿರ್ದೇಶಕ ಹಾಗೂ ಮಹಾನಿರೀಕ್ಷಕರಾದ ಶ್ರೀ ಬಿಂ.ನಾ. ಗರುಡಾಚಾರ್ ಹಾಗೂ ಅವರ ಧರ್ಮಪತ್ನಿ ಶ್ರೀಮತಿ ವತ್ಸಲಾ ಗರುಡಾಚಾರ್ ಬಹುಮಾನ" ಎಂಬ ಹೆಸರಿನಲ್ಲಿ ನೀಡುವುದಕ್ಕೆ ಸರ್ಕಾರದ ಮಂಜೂರಾತಿ ಕೋರಿ ಡಿಜಿ ಮತ್ತು ಐಜಿಪಿ ರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 199 ಪೊಸಇ 2011, ಬೆಂಗಳೂರು, ದಿನಾಂಕ : 28–10–2011**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶ್ರೀ ಬಿಂ.ನಾ. ಗರುಡಾಚಾರ್, ನಿವೃತ್ತ ಪೊಲೀಸ್ ಮಹಾನಿರ್ದೇಶಕ ಹಾಗೂ ಮಹಾನಿರೀಕ್ಷಕರು, ಕರ್ನಾಟಕ ಪೊಲೀಸ್ ಅಕಾಡೆಮಿಯ ನಿರ್ದೇಶಕರ ಹೆಸರಿನಲ್ಲಿ ರೂ. 1.00 ಲಕ್ಷವನ್ನು ಠೇವಣಿಯಿಟ್ಟು ಅದರಿಂದ ಬರುವ ಬಡ್ಡಿ ಹಣವನ್ನು ಕರ್ನಾಟಕ ಪೊಲೀಸ್ ಅಕಾಡೆಮಿ, ಮೈಸೂರು ಹಾಗೂ ಪೊಲೀಸ್ ತರಬೇತಿ ಕಾಲೇಜು, ಗುಲ್ಬರ್ಗಾದಲ್ಲಿ ಏಕಕಾಲದಲ್ಲಿ ನಡೆಯುವ ನಾಗರೀಕ ಪಿ.ಎಸ್.ಐ. (Civil PSI) ತರಬೇತಿಯಲ್ಲಿ ಪ್ರಪ್ರಥಮರಾಗಿ ಉತ್ತೀರ್ಣರಾಗುವ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಅಧಿಕಾರಿಗೆ ದೀಕ್ಷಾಂತ ಸಮಾರೋಹ (Passing out Parade) ದಿನದಂದು ರೂ. 10,000/–ಗಳ (ರೂಪಾಯಿ ಹತ್ತು ಸಾವಿರಗಳು ಮಾತ್ರ) ನಗದು ಬಹುಮಾನವನ್ನು "ನಿವೃತ್ತ ಪೊಲೀಸ್ ಮಹಾನಿರ್ದೇಶಕ ಹಾಗೂ ಮಹಾನಿರೀಕ್ಷಕರಾದ ಶ್ರೀ ಬಿಂ.ನಾ. ಗರುಡಾಚಾರ್, ಹಾಗೂ ಅವರ ಧರ್ಮಪತ್ನಿ ಶ್ರೀಮತಿ ವತ್ಸಲಾ ಗರುಡಾಚಾರ್ ಬಹುಮಾನ" ಎಂಬ ಹೆಸರಿಂದ ನೀಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಒಸಾಇ 28997 ಆಂಆಸ 2011 ದಿನಾಂಕ : 16–07–2011ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 2639

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಕೆ. ನಾಗರಾಜಯ್ಯ, ಪ್ರ.ದ.ಸ. ಇವರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ :**

1. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : ಅಪೀಲು(2)50/2010–11 ದಿನಾಂಕ : 12–10–2010.
2. ಶಿಸ್ತು ಪ್ರಾಧಿಕಾರಿಯವರು ಹೊರಡಿಸಿರುವ ಅಂತಿಮ ಆದೇಶ ಸಂಖ್ಯೆ : ಪೆನ್ನಿ/34/ಡಿಇ/2008–09 ಓಬಿ ಸಂಖ್ಯೆ : 61/2009–10, ದಿನಾಂಕ : 26–08–2009.
3. ಶಿಸ್ತು ಪ್ರಾಧಿಕಾರದ ಆದೇಶ ವಿರುದ್ಧ ಸಲ್ಲಿಸಿದ ಮೇಲ್ಮನವಿ ದಿನಾಂಕ : 13–11–2009.
4. ಮೇಲ್ಮನವಿ ಪ್ರಾಧಿಕಾರರವರ ಆದೇಶ ಸಂಖ್ಯೆ : (4)57/2009–10, ದಿನಾಂಕ : 13–05–2010 ಓಬಿ ಸಂಖ್ಯೆ : 05/2010–11.
5. ಪರಿಷ್ಕರಣ ಮೇಲ್ಮನವಿ ದಿನಾಂಕ : 16–08–2010.
6. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ PSC 95 CNS 2011 : ದಿನಾಂಕ : 21–09–2011.

**ಪ್ರಸ್ತಾವನೆ:**

ಶ್ರೀ ಕೆ. ನಾಗರಾಜಯ್ಯ, ಪ್ರ.ದ.ಸ. ಆಂತರಿಕ ಭದ್ರತಾ ವಿಭಾಗ, ಈ ಹಿಂದೆ ಪ್ರದಸ, ಆರಕ್ಷಕ ಮಹಾ ನಿರೀಕ್ಷಕರ ಕಛೇರಿ, ಕೇಂದ್ರ ವಲಯ, ಬೆಂಗಳೂರು ಇವರ ವಿರುದ್ಧ ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ನಿಯಮ 11 ರಡಿಯಲ್ಲಿ ದೋಷಾರೋಪಣೆ ಹೊರಡಿಸಲಾಗಿದ್ದ ವಿವರಗಳು ಕೆಳಕಂಡಂತಿವೆ.

**ದೋಷಾರೋಪಣೆ:**

"ಶ್ರೀ ಕೆ. ನಾಗರಾಜಯ್ಯ, ಪ್ರ.ದ.ಸ. ರವರು ದಿನಾಂಕ : 15-10-2007 ರಿಂದ ಬೆಂಗಳೂರಿನ ಕೇಂದ್ರ ವಲಯ ಕಛೇರಿಯ ಸಿಬ್ಬಂದಿ (1)ರ ಶಾಖೆಯ ವಿಷಯ ನಿರ್ವಾಹಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಆರಕ್ಷಕ ಮಹಾನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ರವರು ದಿನಾಂಕ : 25-09-2008 ರಂದು ಸದರಿ ಶಾಖೆಯ (ಸಿಬ್ಬಂದಿ-1) ಪರಿವೀಕ್ಷಣೆಯನ್ನು ಕೈಗೊಂಡ ಸಮಯದಲ್ಲಿ ಕಂಡು ಬಂದ ನ್ಯೂನತೆಗಳಾದ ಹೊರಗಿನಿಂದ ಬಂದಂತಹ ಟಪಾಲುಗಳನ್ನು ಪಡೆದುಕೊಂಡು, ಟಿಪ್ಪಣಿ ಬರೆಯದೆ, ಕರಡು ಪತ್ರ ಮಂಡಿಸಿದೆ. ಪತ್ರಗಳನ್ನು ಸರಿಯಾದ ಸಮಯಕ್ಕೆ ವಿಲೇವಾರಿ ಮಾಡದೆ, ಟಪಾಲುಗಳನ್ನು ಕ್ರಮಬದ್ಧವಾಗಿ ನಿರ್ವಹಿಸದೇ, ಕರ್ತವ್ಯವನ್ನು ದಕ್ಷತೆಯಿಂದ ನಿರ್ವಹಿಸಲು ಸಾಮರ್ಥ್ಯವಿಲ್ಲದಿರುವುದು, ಕರ್ತವ್ಯದಲ್ಲಿ ಉದಾಸೀನತೆ, ಕರ್ತವ್ಯ ನಿರ್ಲಕ್ಷ್ಯತೆ, ಬೇಜವಾಬ್ದಾರಿತನವೆಸಗಿರುವುದು ಕಂಡುಬಂದಿರುತ್ತದೆ."

ಮೇಲ್ಕಂಡ ಆರೋಪಗಳ ಹಿನ್ನೆಲೆಯಲ್ಲಿ ಶ್ರೀ ಕೆ. ನಾಗರಾಜಯ್ಯ, ಪ್ರ.ದ.ಸ. ಇವರಿಗೆ ದಿನಾಂಕ 18-05-2009 ರಂದು ಕಾರಣ ಕೇಳುವ ಸೂಚನಾ ಪತ್ರವನ್ನು ನೀಡಿ, ಸಮಜಾಯಿಷಿ ಪಡೆದು, ಸಮಜಾಯಿಷಿಯು ಸಮಂಜಸವಿಲ್ಲದಿರುವುದರಿಂದ ಮೇಲೆ ಓದಲಾದ (2)ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರವು ಈ ಕೆಳಕಂಡಂತೆ ಆದೇಶಿಸಿರುತ್ತದೆ.

"ಶ್ರೀ ಕೆ.ನಾಗರಾಜಯ್ಯ, ಪ್ರಥಮ ದರ್ಜೆ ಸಹಾಯಕ, ಕೇಂದ್ರ ವಲಯ, ಬೆಂಗಳೂರು ರವರ ದಿನಾಂಕ : 14-11-2008 ರಿಂದ 23-03-2009ರ ಅವಧಿಯವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಕೆ.ಸಿ.ಎಸ್. ನಿಯಮ 59(2) ರನ್ವಯ ಇವರನ್ನು ಎರಡು ವರ್ಷಗಳ ಅವಧಿಗೆ ದ್ವಿತೀಯ ದರ್ಜೆ ಸಹಾಯಕರ ಹುದ್ದೆಯ ಹಂತಕ್ಕೆ ಇಳಿಸಿ, ಈ ಅವಧಿಯಲ್ಲಿ ಇವರ ವೇತನವನ್ನು ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಮುಂಬಡ್ತಿಗೆ ಪಡೆದಿರುವ ಪೂರ್ವದಲ್ಲಿದ್ದ ವೇತನಕ್ಕಿಳಿಸಿ ಆದೇಶಿಸಿದೆ."

ಸದರಿ ದಂಡನಾ ಆದೇಶದ ವಿರುದ್ಧ ಮೇಲ್ಮನವಿಯನ್ನು ಸಲ್ಲಿಸಲಾಗಿದ್ದು ಮೇಲ್ಮನವಿ ಪ್ರಾಧಿಕಾರವು ದಿನಾಂಕ : 13-05-2010 ರಂದು ಮೇಲೆ ಓದಲಾದ (4)ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತದೆ.

ಮೇಲಿನ ಎರಡು ಆದೇಶಗಳ ವಿರುದ್ಧ ಸರ್ಕಾರಕ್ಕೆ ದಿನಾಂಕ : 16-08-2010 ರಂದು ಪರಿಷ್ಕರಣ ಮೇಲ್ಮನವಿಯನ್ನು ಸಲ್ಲಿಸಲಾಗಿರುತ್ತದೆ.

ಪರಿಷ್ಕರಣಾ ಮೇಲ್ಮನವಿಯಲ್ಲಿ ಮೇಲ್ಮನವಿದಾರರು ಸಲ್ಲಿಸಿರುವ ಅಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿ ಆಪಾದಿತರು ತಮ್ಮ ಮನವಿಯಲ್ಲಿ ನಮೂದಿಸಿರುವಂತೆ ತಮ್ಮನ್ನು ಹೆಚ್ಚುವರಿ ಪ್ರಭಾರದಲ್ಲಿಟ್ಟ ಕಾರಣ, ಸದರಿ ಹೊಸ ಹುದ್ದೆಯಲ್ಲಿನ ಪತ್ರಗಳನ್ನು ಮಂಡಿಸಲು ತಮಗೆ ಸಮಯಾವಕಾಶ ಬೇಕಾಯಿತು ಎಂಬ ಅಂಶವನ್ನು ಪರಿಗಣಿಸಿ ಸರ್ಕಾರದ ಸುತ್ತೋಲೆ ದಿನಾಂಕ : 14-09-2001ರಲ್ಲಿನ ಐಟಂ-7ರಲ್ಲಿನ ಉದಾಹರಣೆಯನ್ವಯ ಆಪಾದಿತರಿಗೆ ವಿಧಿಸಿರುವ ದಂಡನೆಯು ಹೊಸದಾಗಿರುವುದು ಕಂಡುಬರುತ್ತದೆ. ಆದುದರಿಂದ, ಶ್ರೀ ಕೆ. ನಾಗರಾಜಯ್ಯರವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪರಿಗಣಿಸಿ ಶಿಸ್ತು ಪ್ರಾಧಿಕಾರಿಗಳು ಈಗಾಗಲೇ ವಿಧಿಸಿರುವ ದಂಡನೆಯೂ ಭಾಗಶಃ ಮಾರ್ಪಡಿಸಿ "ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ ಒಂದು ವರ್ಷದ ಕಾಲ ತಡೆಹಿಡಿಯುವ" ದಂಡನೆಯನ್ನು ವಿಧಿಸಲು ಮತ್ತು ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲು ಸರ್ಕಾರವು ತೀರ್ಮಾನಿಸಿ ಮೇಲೆ ಓದಲಾದ (6)ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆಯಲಾಗಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 85 ಪೊಸಿಅ 2010, ಬೆಂಗಳೂರು, ದಿನಾಂಕ: 28-10-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಕೆ. ನಾಗರಾಜಯ್ಯ, ದ್ವಿ.ದ.ಸ. ಇವರ ಪರಿಷ್ಕರಣಾ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ ಇವರಿಗೆ ಶಿಸ್ತು ಪ್ರಾಧಿಕಾರ ವಿಧಿಸಿರುವ ಆದೇಶವನ್ನು ಭಾಗಶಃ ಮಾರ್ಪಡಿಸಿ ಆಪಾದಿತರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ರಹಿತವಾಗಿ ಒಂದು ವರ್ಷದ ಕಾಲ ತಡೆಹಿಡಿಯುವ ದಂಡನೆಯನ್ನು ವಿಧಿಸಿದೆ ಮತ್ತು ಅಮಾನತ್ತಿನ ಅವಧಿಯನ್ನು ಅಮಾನತ್ತು ಎಂದೇ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. ನಂ. 2640

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಪೊಲೀಸ್ ಇಲಾಖೆಯಲ್ಲಿ ಪೊಲೀಸ್ ಅಧಿಕಾರಿ/ನೌಕರರ ವರ್ಗಾವಣೆಗಳ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಒಇ 60 ಪೊಸಇ 2009, ದಿನಾಂಕ : 24-08-2009.
2. ಸರ್ಕಾರದ ಆದೇಶ ಸಂಖ್ಯೆ : ಒಇ 60 ಪೊಸಇ 2009 (ಭಾ-2), ದಿನಾಂಕ : 13-01-2011.
3. ಸರ್ಕಾರದ ಆದೇಶ ಸಂಖ್ಯೆ : ಡಿಪಿಎಆರ್ 4 ಎಸ್‌ಟಿಆರ್ 2001, ದಿನಾಂಕ : 22-11-2001.
4. ಸರ್ಕಾರದ ಆದೇಶ ಸಂಖ್ಯೆ : ಒಇ 60 ಪೊಸಇ 2009 (ಭಾ-2), ದಿನಾಂಕ : 21-05-2011.
5. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 12 ಸೇನೌವ 2011, ದಿನಾಂಕ : 31-05-2011.
6. ಸರ್ಕಾರದ ಆದೇಶ ಸಂಖ್ಯೆ : ಒಇ 60 ಪೊಸಇ 2009 (ಭಾ-2), ದಿನಾಂಕ : 30-06-2011.
7. ಸರ್ಕಾರದ ಆದೇಶ ಸಂಖ್ಯೆ : ಒಇ 60 ಪೊಸಇ 2009 (ಭಾ-2), ದಿನಾಂಕ : 15-07-2011.

**ಪ್ರಸ್ತಾವನೆ:**

ಮೇಲೆ (4)ರಲ್ಲಿ ಓದಲಾದ ದಿನಾಂಕ : 21-05-2011ರ ಸರ್ಕಾರಿ ಆದೇಶದಲ್ಲಿ ಪೊಲೀಸ್ ಅಧಿಕಾರಿ ಮತ್ತು ಪೊಲೀಸ್ ಸಿಬ್ಬಂದಿಗಳ ವರ್ಗಾವಣೆ ಕುರಿತಂತೆ ವಿಸ್ತೃತವಾದ ಮಾರ್ಗ ಸೂಚಿಗಳನ್ನು ನೀಡಲಾಗಿದ್ದು, 2011-12ನೇ ಸಾಲಿನ ಪೊಲೀಸ್ ಸಿಬ್ಬಂದಿಗಳ (ಲಿಪಿಕ ನೌಕರರನ್ನು

ಹೊರತುಪಡಿಸಿ) ಸಾಮಾನ್ಯ ವರ್ಗಾವಣೆಯನ್ನು ಜೂನ್ 15, 2011ರೊಳಗಾಗಿ ಜಾರಿಗೊಳಿಸತಕ್ಕದ್ದು ಎಂದು ಆದೇಶಿಸಲಾಗಿತ್ತು. ಉಲ್ಲೇಖ (5)ರ ಆದೇಶದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಸರ್ಕಾರಿ ನೌಕರರ ವರ್ಗಾವಣೆಗಳನ್ನು ದಿನಾಂಕ : 30–06–2011ರ ವರೆಗೆ ಮಾಡಬಹುದು ಎಂದು ಆದೇಶಿಸಲಾಗಿದೆ. ಈ ಹಿನ್ನೆಲೆಯಲ್ಲಿ ಪೊಲೀಸ್ ಇಲಾಖೆಯಲ್ಲಿನ ಪೊಲೀಸ್ ಅಧಿಕಾರಿ/ನೌಕರರ ವರ್ಗಾವಣೆ ಅವಧಿಯನ್ನು ವಿಸ್ತರಿಸುವುದು ಅವಶ್ಯವೆಂದು ಸರ್ಕಾರವು ಪರಿಗಣಿಸಿ ಸರ್ಕಾರವು ಮೇಲೆ ಓದಲಾದ (6)ರ ಆದೇಶದಲ್ಲಿ ದಿನಾಂಕ : 30–06–2011 ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ತದನಂತರ ಆಡಳಿತಾತ್ಮಕ ಕಾರಣಗಳಿಂದ ಮತ್ತು ಕಾನೂನು ಸುವ್ಯವಸ್ಥೆ ಕಾಪಾಡುವ ಹಿತದೃಷ್ಟಿಯಿಂದ, ಈ ಅವಧಿಯನ್ನು ವಿಸ್ತರಿಸುವುದು ಅಗತ್ಯವೆಂದು ಮನಗಂಡು ಪೊಲೀಸ್ ಇಲಾಖೆಗೆ ಸಂಬಂಧಪಟ್ಟಂತೆ ಪಿಎಸ್‌ಐ, ಸಿಪಿಐ ಮತ್ತು ಡಿವೈಎಸ್‌ಪಿ ವೃಂದದ ಅಧಿಕಾರಿಗಳ ವರ್ಗಾವಣೆ ಪ್ರಕ್ರಿಯೆಯನ್ನು ಮಾತ್ರ ಜುಲೈ 31, 2011 ರವರೆಗೆ ವಿಸ್ತರಿಸಲು ನಿರ್ಣಯಿಸಿ ಮೇಲೆ ಓದಲಾದ (7)ರಲ್ಲಿ ಆದೇಶದಲ್ಲಿ ಹೊರಡಿಸಲಾಗಿದೆ.

ಪ್ರಸ್ತುತ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಹಾಗೂ ಅವಧಿ ಪೂರೈಸಿರುವ ಅಧಿಕಾರಿಗಳ ಪ್ರಕರಣಗಳಲ್ಲಿ ಕಾನೂನು ಸುವ್ಯವಸ್ಥೆ ಕಾಪಾಡುವ ದೃಷ್ಟಿಯಿಂದ ಹಾಗೂ ಆಡಳಿತಾತ್ಮಕ ಕಾರಣಗಳಿಂದ ವರ್ಗಾವಣೆಯನ್ನು ಮಾಡುವುದು ಅವಶ್ಯಕವೆಂದು ಪರಿಗಣಿಸಿ ಪೊಲೀಸ್ ಸಬ್ ಇನ್‌ಸ್ಪೆಕ್ಟರ್, ಪೊಲೀಸ್ ಇನ್‌ಸ್ಪೆಕ್ಟರ್ ಮತ್ತು ಪೊಲೀಸ್ ಉಪಾಧೀಕ್ಷಕರ ವೃಂದದ ಅಧಿಕಾರಿಗಳ ವರ್ಗಾವಣೆ ಅವಧಿಯನ್ನು ದಿನಾಂಕ : 15–11–2011ರ ವರೆಗೆ ವಿಸ್ತರಿಸಲು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 60 ಪೊಸಇ 2009 (ಭಾಗ–2), ಬೆಂಗಳೂರು, ದಿನಾಂಕ: 29–10–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮೇಲೆ ಓದಲಾದ (4)ರಲ್ಲಿನ ದಿನಾಂಕ : 21–05–2011ರ ಸರ್ಕಾರದ ಆದೇಶದಲ್ಲಿ ನಮೂದಿಸಿದ ಷರತ್ತುಗಳೊಂದಿಗೆ ಪೊಲೀಸ್ ಸಬ್ ಇನ್‌ಸ್ಪೆಕ್ಟರ್, ಪೊಲೀಸ್ ಇನ್‌ಸ್ಪೆಕ್ಟರ್, ಪೊಲೀಸ್ ಉಪಾಧೀಕ್ಷಕರ ವೃಂದದ ವರೆಗಿನ ಅಧಿಕಾರಗಳ ವರ್ಗಾವಣೆ ಪ್ರಕ್ರಿಯೆಯ ಅವಧಿಯನ್ನು ದಿನಾಂಕ : 15–11–2011ರ ವರೆಗೆ ವಿಸ್ತರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 2641

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಂ. ನರಸಪ್ಪ, ನಿವೃತ್ತ ಸರ್ಕಾರಿ ಅಭಿಯೋಜಕರು, ಇವರ ವಿರುದ್ಧದ ಇಲಾಖಾ ವಿಚಾರಣೆಯ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ : ಒಇ 946 ಪಿಪಿಇ 2010, ದಿನಾಂಕ : 03–07–2010.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಡಿಪಿಎನ್.ಕೆಡಿಜೆ.414/2003, ದಿನಾಂಕ : 19–08–2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರ ವಿರುದ್ಧ ಮಾಡಲಾಗಿರುವ ಆಪಾದನೆಗಳ ಬಗ್ಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ನಿಯಮ 11ರ ಇಲಾಖಾ ವಿಚಾರಣೆಯನ್ನು ನಡೆಸಲು ನಿಯಮ (2)ರ ಅಡಿಯಲ್ಲಿ ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ನಂ. 2211, ಹೆಚ್.ಎ.ಎಲ್. 3ನೇ ಹಂತ, ಕೋಡಿಹಳ್ಳಿ ಕ್ರಾಸ್, ಬೆಂಗಳೂರು–8 ಇವರನ್ನು ವಿಚಾರಣಾಧಿಕಾರಿಯಾಗಿ ಮತ್ತು ಪ್ರಕರಣದ ದಾಖಲೆಗಳನ್ನು ಸರ್ಕಾರದ ಪರವಾಗಿ ವಿಚಾರಣಾ ಪ್ರಾಧಿಕಾರಿಯವರ ಮುಂದೆ ಮಂಡಿಸಲು ಮೇಲ್ಕಂಡ ನಿಯಮಗಳ ನಿಯಮ 11(5)(ಸಿ)ರನ್ವಯ ಶ್ರೀ ವಿ.ಕೆ. ಪಾಟೀಲ್, ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ವಿಭಾಗ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾಗಿರುವ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರ ಪತ್ರದಲ್ಲಿ ವಿಚಾರಣಾಧಿಕಾರಿಯಾದ ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ಸ್ಥಾನದಲ್ಲಿ ಶ್ರೀ ಬಿ.ರಂಗಸ್ವಾಮಿ, ಬಿ.ಎ.ಬಿ.ಎಲ್. ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ. 768, 9ನೇ ಮೇನ್, 3ನೇ ಬ್ಲಾಕ್, 3ನೇ ಸ್ಟೇಜ್, ಬಸವೇಶ್ವರನಗರ, ಬೆಂಗಳೂರು, ಇವರನ್ನು ಹಾಗೂ ಸದರಿ ಪ್ರಕರಣದ ಮಂಡನಾಧಿಕಾರಿಯಾದ ಶ್ರೀ ವಿ.ಕೆ. ಪಾಟೀಲ್, ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ವಲಯ, ಬೆಂಗಳೂರು, ಇವರು ದಿನಾಂಕ : 30–09–2011 ರಂದು ನಿವೃತ್ತರಾಗಲಿರುವುದರಿಂದ ಇವರ ಸ್ಥಾನದಲ್ಲಿ ಶ್ರೀ ಬಿ. ರಂಗಸ್ವಾಮಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ ಬೆಂಗಳೂರು, ಇವರನ್ನು ನೇಮಿಸಲು ದಿನಾಂಕ : 03–07–2010ರ ಸರ್ಕಾರದ ಆದೇಶವನ್ನು ಮಾರ್ಪಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಒಇ 946 ಪಿಪಿಇ 2005, ಬೆಂಗಳೂರು, ದಿನಾಂಕ: 28–10–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ವಿಚಾರಣಾಧಿಕಾರಿಯಾದ ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ. 2211, ಹೆಚ್.ಎ.ಎಲ್. 3ನೇ ಹಂತ, ಕೋಡಿಹಳ್ಳಿ ಕ್ರಾಸ್, ಬೆಂಗಳೂರು–8. ಸದರಿ ಪ್ರಕರಣದ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸದೆ ಇರುವ ಕಾರಣ ವಿಳಂಬವನ್ನು ತಡೆಯುವ ಸಲುವಾಗಿ, ಇವರ ಬದಲಿಗೆ ಬೇರೊಬ್ಬ ವಿಚಾರಣಾಧಿಕಾರಿ ನೇಮಿಸುವ ಸಲುವಾಗಿ ಹಾಗೂ ಸದರಿ ಪ್ರಕರಣದ ಮಂಡನಾಧಿಕಾರಿಯಾದ ಶ್ರೀ ವಿ.ಕೆ.ಪಾಟೀಲ್, ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ವಲಯ, ಬೆಂಗಳೂರು, ಇವರು ದಿನಾಂಕ : 30–09–2011ರಂದು ನಿವೃತ್ತಿ ಆಗಿರುವುದರಿಂದ ಸರ್ಕಾರದ ಆದೇಶ ಸಂಖ್ಯೆ : ಒಇ 946 ಪಿಪಿಇ 2010, ದಿನಾಂಕ : 03–07–2010ನ್ನು ರದ್ದುಗೊಳಿಸಿದೆ.

ಇನ್ನು ಶ್ರೀ ಎಂ.ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರ ವಿರುದ್ಧ ಪ್ರಸ್ತಾವನೆಯಲ್ಲಿ ಮಾಡಲಾಗಿರುವ ಆಪಾದನೆಗಳ ಬಗ್ಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ನಿಯಮ 11ರ ಇಲಾಖಾ ವಿಚಾರಣೆಯನ್ನು

ನಡೆಸಲು ನಿಯಮ (2)ರ ಅಡಿಯಲ್ಲಿ ಶ್ರೀ ಬಿ.ರಂಗಸ್ವಾಮಿ, ಬಿ.ಎ.ಬಿ.ಎಲ್. ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ. 768, 9ನೇ ಮೇನ್, 3ನೇ ಬ್ಲಾಕ್, 3ನೇ ಸ್ಟೇಜ್, ಬಸವೇಶ್ವರನಗರ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿ ಮತ್ತು ಪ್ರಕರಣದ ದಾಖಲೆಗಳನ್ನು ಸರ್ಕಾರದ ಪರವಾಗಿ ವಿಚಾರಣಾ ಪ್ರಾಧಿಕಾರಿಯವರ ಮುಂದೆ ಮಂಡಿಸಲು ಮೇಲ್ಕಂಡ ನಿಯಮಗಳ ನಿಯಮ 11(5)(ಸಿ)ರ ಅನ್ವಯ ಶ್ರೀ ಬಿ. ರಂಗಸ್ವಾಮಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಇಲಾಖಾ ವಿಚಾರಣೆಯನ್ನು ಕೂಡಲೇ ಪ್ರಾರಂಭಿಸಿ ಮೂರು ತಿಂಗಳೊಳಗೆ ವಿಚಾರಣೆಯನ್ನು ಮುಕ್ತಾಯಗೊಳಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ನಿಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)

ಪಿ.ಆರ್. ನಂ. 2642

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಸರ್ಕಾರದ ನಿರ್ಣಯಗಳನ್ನು ಜಾರಿಗೊಳಿಸುವ ಸಲುವಾಗಿ ಸರ್ಕಾರಿ ಆದೇಶ ಇತ್ಯಾದಿಗಳನ್ನು ಆನ್‌ಲೈನ್ ಮೂಲಕ ತಯಾರಿಸಲು, ಅನುಮೋದಿಸಲು, ದೃಢೀಕರಿಸಲು ಮತ್ತು ಹೊರಡಿಸಲು ದಿನಾಂಕ : 29–08–2011ರ ಆದೇಶ ಸಂಖ್ಯೆ : ಸಿಆಸುಇ 90 ಇಆಇ 2009 (ಭಾಗ–1)ರನ್ವಯ ನಿಗದಿಪಡಿಸಿದ ವ್ಯವಸ್ಥೆಯನ್ನು ಜಾರಿಗೊಳಿಸುವ ಸಲುವಾಗಿ ಇ–ಆಡಳಿತ ಕೇಂದ್ರ, ಬೆಂಗಳೂರು, ವನ್ನು ಜಾರಿಗೊಳಿಸುವ ಸಂಸ್ಥೆ (implementing agency) ಯನ್ನಾಗಿ ಗೊತ್ತುಪಡಿಸುವ ಬಗ್ಗೆ.

**ಓದಲಾಗಿದೆ :** ದಿನಾಂಕ : 29–08–2011ರ ಆದೇಶ ಸಂಖ್ಯೆ : ಸಿಆಸುಇ 90 ಇಆಇ 2009 (ಭಾಗ–1).

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ದಿನಾಂಕ : 29–08–2011ರ ಆದೇಶದನ್ವಯ ಈ ಕೆಳಗೆ ಉದ್ದರಿಸಿದಂತೆ ಆದೇಶಿಸಲಾಗಿದೆ.

"(ಎ) ಸರ್ಕಾರದ ನಿರ್ಣಯಗಳನ್ನು ಸಂಬಂಧಿಸಿದವರಿಗೆ ತಿಳಿಸುವ ಹಾಗೂ ಅವುಗಳನ್ನು ಜಾರಿಗೊಳಿಸುವ ಸಲುವಾಗಿ ಸರ್ಕಾರಿ ಆದೇಶ ಸುತ್ತೋಲೆ, ಅಧಿಕೃತ ಜ್ಞಾಪನ, ಅಧಿಸೂಚನೆ ಇತ್ಯಾದಿಗಳನ್ನು ಡಿಜಿಟಲ್ (ಆನ್‌ಲೈನ್) ರೂಪದಲ್ಲಿ ತಯಾರಿಸುವ, ಅನುಮೋದಿಸುವ, ದೃಢೀಕರಿಸುವ ಹಾಗೂ ಅವುಗಳನ್ನು ಕರ್ನಾಟಕ ಸರ್ಕಾರ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 19ನ್ನು ಕರ್ನಾಟಕ ಸರ್ಕಾರ ಸಚಿವಾಲಯದ ಕಛೇರಿ ಕಾರ್ಯ ವಿಧಾನ ಕೈಪಿಡಿ (ಪರಿಷ್ಕೃತ) 2005ರ ಕಂಡಿಕೆ 92 ಮತ್ತು 93 ಗಳೊಂದಿಗೆ ಓದಿಕೊಂಡಂತೆ, ಇವುಗಳನ್ವಯ ದೃಢೀಕರಿಸಲು ಅಧಿಕಾರ ಹೊಂದಿದ ಅಧಿಕಾರಿ/ಸಿಬ್ಬಂದಿಯ ಡಿಜಿಟಲ್ ಸಹಿಯ ಮೇರೆಗೆ ವೆಬ್‌ಸೈಟ್‌ನಲ್ಲಿ ಹಾಕುವ ಮೂಲಕ ಹೊರಡಿಸುವ ವಾಡಿಕೆಯನ್ನು ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಜಾರಿಗೆ ತರತಕ್ಕದ್ದು.

ಮತ್ತು

(ಬಿ) ಮೇಲಿನ (ಎ)ರಲ್ಲಿ ನಮೂದಿಸಿದ ವಾಡಿಕೆಯನ್ನು ಕರ್ನಾಟಕ ಸರ್ಕಾರ ಸಚಿವಾಲಯದ ಎಲ್ಲಾ ಇಲಾಖೆಗಳು ಸಂಪೂರ್ಣವಾಗಿ ಮತ್ತು ತೃಪ್ತಿಕರವಾಗಿ ಅಳವಡಿಸಿ ಜಾರಿಗೊಳಿಸುವವರೆಗೆ ಸದರಿ ಸಂವಾದಗಳನ್ನು ಕಾಗದ ರೂಪದಲ್ಲಿ ತಯಾರಿಸುವ, ಅನುಮೋದಿಸುವ, ದೃಢೀಕರಿಸುವ ಮತ್ತು ಹೊರಡಿಸುವ ವಾಡಿಕೆಯನ್ನು ಏಕಕಾಲಕ್ಕೆ ಮುಂದುವರೆಸುತ್ತಾ, ಅದಾದ ನಂತರ ಆ ವಾಡಿಕೆಯನ್ನು ನಿಲ್ಲಿಸತಕ್ಕದ್ದು.

ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರು ಈ ಆದೇಶವನ್ನು ಕಟ್ಟುನಿಟ್ಟಾಗಿ ಪಾಲಿಸುವುದನ್ನು ಖಚಿತ ಪಡಿಸಿಕೊಳ್ಳತಕ್ಕದ್ದು.

2. ಮೇಲೆ (1)ರಲ್ಲಿ ಓದಲಾದ ದಿನಾಂಕ : 29–08–2011ರ ಆದೇಶವನ್ನು ಜಾರಿಗೊಳಿಸುವ ಸಲುವಾಗಿ ಜಾರಿಗೊಳಿಸುವ ಸಂಸ್ಥೆ (implementing agency) ಯನ್ನು ಗೊತ್ತುಪಡಿಸುವ ವಿಷಯವನ್ನು ಸರ್ಕಾರ ಪರಿಶೀಲಿಸಿದೆ. ಅದರಂತೆ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 90 ಇಆಇ 2009 (ಭಾಗ–1), ಬೆಂಗಳೂರು, ದಿನಾಂಕ: 18–10–2011**

ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ, ಮೇಲೆ (1)ರಲ್ಲಿ ಓದಲಾದ ದಿನಾಂಕ : 29–08–2011ರ ಆದೇಶವನ್ನು ಜಾರಿಗೊಳಿಸುವ ಸಲುವಾಗಿ, ಸರ್ಕಾರವು, ಇ–ಆಡಳಿತ ಕೇಂದ್ರ, ಬೆಂಗಳೂರು, ವನ್ನು ಜಾರಿಗೊಳಿಸುವ ಸಂಸ್ಥೆ (implementing agency) ಯನ್ನಾಗಿ ಈ ಮೂಲಕ ಗೊತ್ತುಪಡಿಸಿದೆ.

ಮೇಲೆ (1)ರಲ್ಲಿ ಓದಲಾದ ದಿನಾಂಕ : 29–08–2011ರ ಆದೇಶದ ಉದ್ದೇಶಕ್ಕಾಗಿ ಅಗತ್ಯ ತಾಂತ್ರಿಕ ನೆರವನ್ನು ಸದರಿ ಜಾರಿಗೊಳಿಸುವ ಸಂಸ್ಥೆ (implementing agency) ಯಿಂದ ಪಡೆಯಬಹುದಾಗಿದೆ. ಉದಾಹರಣೆಗೆ, ಸಂಬಂಧಪಟ್ಟ ಅಧಿಕಾರಿ/ಸಿಬ್ಬಂದಿಗಳಿಗೆ ಡಿಜಿಟಲ್ ಸಹಿಯ ಪ್ರಮಾಣ ಪತ್ರಗಳು/ಇ–ಟೋಕನ್‌ಗಳನ್ನು ನೀಡಬೇಕಾಗಿದ್ದು, ಅವುಗಳನ್ನು ಆ ಸಂಸ್ಥೆಯಿಂದ ಪಡೆಯಲು ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರು ಕ್ರಮ ತೆಗೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಬಿ. ಬ್ರಹ್ಮಪ್ರಸಾದ್**
ಪೀಠಾಧಿಕಾರಿ–1
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಇ–ಆಡಳಿತ)

ಪಿ.ಆರ್. ನಂ. 2644

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಸಿ. ಚಂದ್ರಯ್ಯ, ನಿವೃತ್ತ ಉಪ ಕಾರ್ಯದರ್ಶಿ, ಇವರ ವಿರುದ್ಧ ಇಲಾಖಾ ವಿಚಾರಣೆ–ಮಂಡನಾಧಿಕಾರಿ ನೇಮಕ–ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : "ಸಿಆಸುಇ 19 ಸೇಇವಿ 2010" ದಿನಾಂಕ : 01–08–2011.
2. ಶ್ರೀ ಅಬ್ದುಲ್ ರೆಹಮಾನ್, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಅಸುರಾವಿವೇ–1) ಇವರ ಮನವಿ, ದಿನಾಂಕ : 09–08–2011.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ : 01–08–2011 ರ ಸರ್ಕಾರಿ ಆದೇಶದಲ್ಲಿ ಶ್ರೀ ಸಿ. ಚಂದ್ರಯ್ಯ, ನಿವೃತ್ತ ಉಪ ಕಾರ್ಯದರ್ಶಿ, ಇವರ ವಿರುದ್ಧ ಇಲಾಖಾ ವಿಚಾರಣೆಯಲ್ಲಿ ಶ್ರೀ ಎಂ.ಜಿ. ಹಿರೇಮಠ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಶ್ರೀ ಅಬ್ದುಲ್ ರೆಹಮಾನ್, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಆಸು) ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಕ ಮಾಡಲಾಗಿತ್ತು. ಶ್ರೀ ಅಬ್ದುಲ್ ರೆಹಮಾನ್, ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಆಸು–ರಾವಿವೇ–1) ಇಲ್ಲಿಗೆ ಆಂತರಿಕ ಬದಲಾವಣೆ ಗೊಂಡಿರುವುದರಿಂದ ಸದರಿ ಅಧಿಕಾರಿಯು ಮೇಲೆ (2)ರಲ್ಲಿ ಓದಲಾದ ದಿನಾಂಕ : 09–08–2011ರ ಮನವಿಯಲ್ಲಿ ತಾವು ಸ್ವಾತಂತ್ರ್ಯ ಯೋಧರ ಗೌರವ ಧನಕ್ಕೆ ಸಂಬಂಧಪಟ್ಟ ಹಲವಾರು ರಿಟ್ ಅರ್ಜಿ/ನ್ಯಾಯಾಲಯ ಪ್ರಕರಣಗಳಿಗೆ ಕಂಡಿಕೆ ವಾರು ಷರಾ ತಯಾರಿಕೆ ಜೊತೆಗೆ ಧಾರವಾಡ ಮತ್ತು ಗುಲ್ಬರ್ಗಾ ಸಂಚಾರಿ ಪೀಠಗಳಿಗೆ ಖುದ್ದಾಗಿ ಹಾಜರಾಗಬೇಕಾಗಿರುವುದರಿಂದ ತಮ್ಮ ಬದಲಾಗಿ ಬೇರೆ ಮಂಡನಾಧಿಕಾರಿಯನ್ನು ನೇಮಿಸುವಂತೆ ಕೋರಿದ್ದಾರೆ. ಇದನ್ನು ಪರಿಸೀಲಿಸಿದೆ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ಸೇಇವಿ 2010, ಬೆಂಗಳೂರು, ದಿನಾಂಕ: 03–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನಲೆಯಲ್ಲಿ ದಿನಾಂಕ : 01–08–2011ರ ಸರ್ಕಾರಿ ಆದೇಶದಲ್ಲಿ ಮಂಡನಾಧಿಕಾರಿಯನ್ನಾಗಿ ಶ್ರೀ ಅಬ್ದುಲ್ ರೆಹಮಾನ್, ಸರ್ಕಾರದ ಅಧೀನ ಕಾರ್ಯದರ್ಶಿ, ಇವರನ್ನು ನೇಮಿಸಿರುವುದನ್ನು ಮಾರ್ಪಡಿಸಿ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆಗಳಿಗೆ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಆಸು–ತರಬೇತಿ) ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ವಿಚಾರಣಾಧಿಕಾರಿಯವರನ್ನು ನೇಮಿಸಿ ಹೊರಡಿಸಿರುವ ದಿನಾಂಕ : 01–08–2011ರ ಆದೇಶದಲ್ಲಿ ಈಗಾಗಲೇ, ನಿರ್ದೇಶಿಸಿರುವಂತೆ ಎಲ್ಲ ಸಲಹೆ ಸೂಚನೆಗಳು ಮುಂದುವರೆಯುತ್ತವೆ. ಉಳಿದಂತೆ ಶ್ರೀ ಎಂ.ಜಿ. ಹಿರೇಮಠ್, ನಿವೃತ್ತ ನ್ಯಾಯಾಧೀಶರವರೇ ಈ ಪ್ರಕರಣದ ವಿಚಾರಣಾಧಿಕಾರಿಯಾಗಿ ಮುಂದುವರಿಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು–3)

ಪಿ.ಆರ್. ನಂ. 2645

## ಶಿಕ್ಷಣ ಸಚಿವಾಲಯ

**ವಿಷಯ :** ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಚಂದ್ರಶೇಖರ ಶಿಕ್ಷಣ ಸಂಸ್ಥೆಯ ಪ್ರಥಮ ದರ್ಜೆ ಕಲಾ ಮತ್ತು ವಾಣಿಜ್ಯ ಕಾಲೇಜು, ಮನ್ನಾ ಎಖ್ಖೇಳ್ಳಿ, ಹುಮ್ನಾಬಾದ್ ಬೀದರ್ ಕಾಲೇಜು ಹಾಗೂ ಅಲ್ಲಿನ ಬೋಧಕರ ಹುದ್ದೆಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 551 ಯುಪಿಸಿ 99 ದಿನಾಂಕ: 07–08–2003
2. ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 30 ಯುಪಿಸಿ 2008 ದಿನಾಂಕ: 13–05–2009
3. ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 30 ಯುಪಿಸಿ 2008 ದಿನಾಂಕ: 05–10–2009
4. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ:14:ಪ.ಜಾ.ಪ.ಪಂ:ಗುವಿ:ಪಿಸಿಸಿ–2:2010–11, ದಿನಾಂಕ: 08–09–2010.
5. ಸಚಿವ ಸಂಪುಟದ ಟಿಪ್ಪಣಿ ಸಂಖ್ಯೆ: ಸಿ:499:2011, ದಿನಾಂಕ: 28–10–2011.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಅಧಿಸೂಚನೆಯನ್ವಯ ರಚಿಸಲಾದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ನಿಯಮ 8(1)ರನ್ವಯ ದಿನಾಂಕ: 01–06–1987ರ ನಂತರ ಪ್ರಾರಂಭಿಸಲಾದ ಯಾವುದೇ ಖಾಸಗಿ ಪದವಿ ಕಾಲೇಜುಗಳು ಮತ್ತು ವಿಷಯಗಳನ್ನು ಅನುದಾನದ ವ್ಯಾಪ್ತಿಗೆ ಒಳಪಡಿಸಲು ಅವಕಾಶವಿರುವುದಿಲ್ಲ.

ರಾಜ್ಯದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಗಳು ದಿನಾಂಕ: 01–06–1987ರಿಂದ ದಿನಾಂಕ: 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲಾಗುತ್ತಿರುವ ಕಾಲೇಜುಗಳು ಮತ್ತು ಕೋರ್ಸ್‌ಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರ ತೀರ್ಮಾನಿಸಿ ಈ ಕುರಿತು ನಿಯಮಗಳನ್ನು ರಚಿಸಲು ದಿನಾಂಕ: 18–02–2009ರಂದು ಜರುಗಿದ ಸಚಿವ ಸಂಪುಟ ಸಭೆಯು ಅನುಮೋದನೆ ನೀಡಿದೆ.

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಯಿಂದ ನಡೆಸಲ್ಪಡುತ್ತಿರುವ ಖಾಸಗಿ ಪದವಿ ಕಾಲೇಜುಗಳಿಗೆ ಸಂಬಂಧಿಸಿದಂತೆ ಮಾತ್ರ ಮೇಲೆ ಹೇಳಿದ ನಿಯಮ 8ಕ್ಕೆ ಸೂಕ್ತ ಸೇರ್ಪಡೆ ಮಾಡಿ ದಿನಾಂಕ: 01–06–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಲ್ಪಟ್ಟ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೊಳಪಡಿಸಲು ಓದಲಾದ (2)ರ ದಿನಾಂಕ: 13–05–2009ರ ಅಧಿಸೂಚನೆಯಲ್ಲಿ ಸೂಕ್ತ ತಿದ್ದುಪಡಿ ಮಾಡಿ ಅವಕಾಶ ಕಲ್ಪಿಸಲಾಗಿದೆ. ಅದರಂತೆ ಓದಲಾದ (3)ರ ದಿನಾಂಕ: 05–10–2009ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ: 01–06–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಕೆಲವು

ಮಾನದಂಡಗಳನ್ನು ನಿಗಧಿಪಡಿಸಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (4)ರ ದಿನಾಂಕ: 08-09-2010ರ ಪ್ರಸ್ತಾವನೆಯಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಸದರಿ ಕಾಲೇಜಿನ ಯಾವ ಯಾವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ವರ್ಗದವರನ್ನು ವೇತನಾನುದಾನಕ್ಕೆ ಒಳಪಡಿಸಬೇಕು ಎಂಬುದನ್ನು ಪರಿಶೀಲಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ಸದರಿ ಕಾಲೇಜನ್ನು ಹಾಗೂ ಅದರಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿತ್ತು. ಈಗಾಗಲೇ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ನಡೆಸುತ್ತಿರುವ 5 ಕಾಲೇಜುಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ವಿಧಿಸಲಾಗಿದ್ದ ಷರತ್ತುಗಳೊಂದಿಗೆ ಹೆಚ್ಚುವರಿಯಾಗಿ ಕೆಲವು ಷರತ್ತುಗಳನ್ನು ವಿಧಿಸಿ ಅವುಗಳನ್ನು ಪೂರೈಸಿದ್ದಲ್ಲಿ ಎರಡನೇ ಹಂತವಾಗಿ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಆರ್ಥಿಕ ಇಲಾಖೆಯು ತಿಳಿಸಿದೆ. ಆದರೆ, ಪ್ರಥಮ ಹಂತವಾಗಿ ವೇತನಾನುದಾನಕ್ಕೆ ಒಳಪಡಿಸಲಾದ 5 ಕಾಲೇಜುಗಳಿಗೆ ವಿಧಿಸದೇ ಇದ್ದ ಹೆಚ್ಚುವರಿ ಷರತ್ತುಗಳನ್ನು ವಿಧಿಸಿತ್ತು. ಈ ಹೆಚ್ಚುವರಿ ಷರತ್ತುಗಳನ್ನು ವಿಧಿಸದಂತೆ ವಿನಾಯಿತಿ ನೀಡುವಂತೆ ಸಚಿವ ಸಂಪುಟದ ಅನುಮೋದನೆ ಕೋರಲಾಗಿದ್ದು, ಸಚಿವ ಸಂಪುಟವು ಮೇಲೆ ಓದಲಾದ (5)ರಲ್ಲಿ ಆರ್ಥಿಕ ಇಲಾಖೆಯು ಹೆಚ್ಚುವರಿಯಾಗಿ ವಿಧಿಸಿರುವ ಷರತ್ತುಗಳನ್ನು ಸಡಿಲಿಸಿ, ಸದರಿ ಕಾಲೇಜು ಹಾಗೂ ಇತರೆ 9 ಕಾಲೇಜುಗಳನ್ನು ಮತ್ತು ಅವುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರ್ಹ ಬೋಧಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಅನುಮತಿ ನೀಡಿದೆ. ಅದರಂತೆ, ಕಾಲೇಜು ಶಿಕ್ಷಣ ನಿರ್ದೇಶನಾಲಯದ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಲಾದ ಅಭ್ಯರ್ಥಿಗಳ ವಿದ್ಯಾರ್ಹತೆ, ವಿಷಯಗಳ ಕಾರ್ಯಭಾರ ಮತ್ತು ಮೀಸಲಾತಿ ಪರಿಶೀಲಿಸಿ ಸದರಿ ಕಾಲೇಜನ್ನು ಮತ್ತು ಸದರಿ ಕಾಲೇಜಿನಲ್ಲಿ ವಿಷಯವಾರು ಹುದ್ದೆಗಳ ಎದುರು ಕಾರ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರುಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಅನುದಾನದ ವ್ಯಾಪ್ತಿಗೆ ಒಳಪಡಿಸಲು ಸರ್ಕಾರ ತೀರ್ಮಾನಿಸಿದೆ.

ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 160 ಯುಪಿಸಿ 2010, ಬೆಂಗಳೂರು, ದಿನಾಂಕ: 11-11-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ: 01-06-1987 ರಿಂದ 31-03-1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಬೀದರ್ ಜಿಲ್ಲೆಯ ಹುಮ್ನಾಬಾದ್ ತಾಲ್ಲೂಕಿನ ಮನ್ನಾ ಎಖ್ಖೇಳಿಯ ಚಂದ್ರಶೇಖರ ಶಿಕ್ಷಣ ಸಂಸ್ಥೆಯ ಪ್ರಥಮ ದರ್ಜೆ ಕಲಾ ಮತ್ತು ವಾಣಿಜ್ಯ ಕಾಲೇಜನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯದೊಂದಿಗೆ ಜಾರಿಗೆ ಬರುವಂತೆ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ ಹಾಗೂ ಸದರಿ ಕಾಲೇಜನ್ನು ಮತ್ತು ಸದರಿ ವಿಷಯಗಳಲ್ಲಿ ವಿಷಯವಾರು ಹುದ್ದೆಗಳ ಎದುರು ಕಾರ್ಯ ನಿರ್ವಹಿಸುತ್ತಿರುವ ಕೆಳಕಂಡ ಅರ್ಹ ಸಹಾಯಕ ಪ್ರಾಧ್ಯಾಪಕರು ಹಾಗೂ ಅವರುಗಳು ಬೋಧಿಸುತ್ತಿರುವ ಹುದ್ದೆ/ವಿಷಯಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ವೇತನಾನುದಾನ ವ್ಯಾಪ್ತಿಗೆ ತರಲಾಗಿದೆ.

| ಕ್ರಮ ಸಂಖ್ಯೆ | ವೇತನಾನುದಾನಕ್ಕೆ ಒಳಪಡಿಸಿದ ಬೋಧಕರ ಹೆಸರು | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆ ವಿಷಯ | ಪರಿಗಣಿಸಲಾದ ಮೀಸಲಾತಿ | ವೇತನಾನು ದಾನಕ್ಕೆ ಒಳಪಡಿಸಿದ ಹುದ್ದೆಗಳ ಸಂಖ್ಯೆ | ಕಾರ್ಯಭಾರ | ವೇತನ ಶ್ರೇಣಿ |
|---|---|---|---|---|---|---|
| 1 | ರಮೇಶ ತಂದೆ ಬಕ್ಕಪ್ಪಾ ಬುಳ್ಳಾ | ಕನ್ನಡ ಉಪನ್ಯಾಸಕರು | ಪ.ಜಾತಿ | 2 | 32 ಗಂಟೆ | ಯುಜಿಸಿ |
| 2 | ಪ್ರಕಾಶ ತಂದೆ ನರಸಪ್ಪಾ | ಕನ್ನಡ ಉಪನ್ಯಾಸಕರು | ಜಿ.ಎಂ. | | | |
| 3 | ಬಸವರಾಜ ತಂದೆ ವೀರಶೆಟ್ಟಿ | ಸಮಾಜಶಾಸ್ತ್ರ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 28 ಗಂಟೆ | ಯುಜಿಸಿ |
| 4 | ರವೀಂದ್ರ ತಂದೆ ಲಕ್ಷ್ಮಣ | ರಾಜ್ಯಶಾಸ್ತ್ರ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 32 ಗಂಟೆ | ಯುಜಿಸಿ |
| 5 | ರಾಜಶೇಖರ ತಂದೆ ಗುಂಡಪ್ಪ | ಇತಿಹಾಸ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 16 ಗಂಟೆ | ಯುಜಿಸಿ |
| 6 | ಕಲ್ಲಪ್ಪಾ ತಂದೆ ರುದ್ರಪ್ಪಾ | ಅರ್ಥಶಾಸ್ತ್ರ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 16 ಗಂಟೆ | ಯುಜಿಸಿ |
| 7 | ಬಸವರಾಜ ತಂದೆ ಶಿವಶರಣಪ್ಪ | ದೈಹಿಕ ಶಿಕ್ಷಣ ಬೋಧಕರು | ಅನ್ವಯಿಸುವುದಿಲ್ಲ | 01 | - | ಯುಜಿಸಿ |

1. ಒಂದು ವೇಳೆ ಈ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಟ್ಟ ಬೋಧಕರುಗಳ ಪೈಕಿ ಯಾವುದೇ ಅನರ್ಹತೆ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆಯಿಲ್ಲದೆ, ವೇತನಾನುದಾನವನ್ನು ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.
2. ಈ ನೇಮಕಾತಿಗಳಲ್ಲಿ ಮೀಸಲಾತಿಯಲ್ಲಿ ವ್ಯತ್ಯಾಸವಾಗಿರುವುದು ಕಂಡುಬಂದಲ್ಲಿ ಅಂಥವರ ವೇತನಾನುದಾನವನ್ನು ಸಹ ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.
3. ವೇತನಾನುದಾನದ ವ್ಯಾಪ್ತಿಗೆ ಒಳಪಟ್ಟಂತಹ ಮೇಲ್ಕಂಡ ಉಪನ್ಯಾಸಕರುಗಳ ವೇತನವನ್ನು ಆದೇಶ ಹೊರಡಿಸಿದ ದಿನಾಂಕದಿಂದ ವಿಸ್ತರಿಸಿರುವ ವೇತನ ಶ್ರೇಣಿಯ ಕನಿಷ್ಠ ಮೂಲ ವೇತನದಲ್ಲಿ ನಿಗದಿ ಪಡಿಸತಕ್ಕದ್ದು. ಹಾಗೂ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲಾದ ಪೂರ್ವದಲ್ಲಿ ಸಲ್ಲಿಸಿರುವ ಸೇವೆಯನ್ನು ಯಾವುದೇ ಸೇವಾ ಹಾಗೂ ಪಿಂಚಣಿ ಸೌಲಭ್ಯಗಳಿಗೆ ಪರಿಗಣಿಸುವಂತಿಲ್ಲ.
4. ದಿನಾಂಕ: 11-07-2009ರ ಪೂರ್ವದಲ್ಲಿ ನೇಮಕಾತಿ ಹೊಂದಿದವರು ಎಂ.ಫಿಲ್. ಪದವಿ ಹೊಂದಿದ್ದಲ್ಲಿ ಯುಜಿಸಿ ವೇತನ ಶ್ರೇಣಿ ನೀಡಲು ಪರಿಗಣಿಸಲಾಗುತ್ತಿದೆ. ಆದರೆ, ಈ ಪ್ರಕರಣದಲ್ಲಿ ಬಹುತೇಕ ಉಪನ್ಯಾಸಕರುಗಳು ದಿನಾಂಕ: 11-07-2009ರ ಪೂರ್ವದಲ್ಲಿ

ನಡೆದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ್ದು, ಅವರುಗಳ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ವಿಶ್ವವಿದ್ಯಾಲಯಗಳು ದಿನಾಂಕ: 11–07–2009ರ ನಂತರ ವಿತರಿಸಿದೆ. ಈ ಹಿನ್ನೆಲೆಯಲ್ಲಿ ಅವರುಗಳಿಗೆ ಯುಜಿಸಿ ವೇತನ ಶ್ರೇಣಿ ವಿಸ್ತರಿಸುವ ಸಂಬಂಧ ಯಾವ ದಿನಾಂಕವನ್ನು ಅಂದರೆ ಪರೀಕ್ಷೆ ನಡೆದ ದಿನಾಂಕ ಅಥವಾ ಪ್ರಮಾಣ ಪತ್ರ ವಿತರಿಸಿರುವ ದಿನಾಂಕ ಈ ಎರಡರಲ್ಲಿ ಯಾವ ದಿನಾಂಕ: ಪರಿಗಣಿಸಬೇಕು ಎಂಬುದರ ಕುರಿತು ಇಂತಹ ಬೇರೆ ಪ್ರಕರಣಗಳಲ್ಲಿ ಸಿಆಸು ಇಲಾಖೆ/ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಲಾಗುತ್ತಿದೆ. ಆದುದರಿಂದ, ಒಂದು ವೇಳೆ ಸರ್ಕಾರವು ವೇತನಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರುಗಳ ಎಂ.ಫಿಲ್. ವಿದ್ಯಾರ್ಹತೆಯನ್ನು ಪ್ರಮಾಣ ಪತ್ರ ವಿತರಿಸಿರುವ ದಿನಾಂಕದಿಂದ ಪರಿಗಣಿಸುವಂತೆ ನಿರ್ಧಾರ ಕೈಗೊಂಡಲ್ಲಿ ಯುಜಿಸಿ ವೇತನ ಶ್ರೇಣಿ ಹಿಂದಕ್ಕೆ ಪಡೆದು ಅಂತಹ ಉಪನ್ಯಾಸಕರುಗಳಿಗೆ ರಾಜ್ಯ ವೇತನ ಶ್ರೇಣಿಯಲ್ಲಿ ವೇತನ ಪುನರ್ ಪರಿಷ್ಕರಿಸುವ ಷರತ್ತಿಗೊಳಪಟ್ಟಿರುತ್ತದೆ.

5. ವೇತನಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರುಗಳ ಕಾರ್ಯಭಾರದಲ್ಲಿ ಕೊರತೆ ಉದ್ಭವಿಸಿದ ಪಕ್ಷದಲ್ಲಿ ಅಂತಹ ಉಪನ್ಯಾಸಕರುಗಳನ್ನು ಕಾರ್ಯಭಾರ ಇರುವಂತಹ ಅನುದಾನಿತ ಕಾಲೇಜು/ಸರ್ಕಾರಿ ಕಾಲೇಜುಗಳ ಕಾರ್ಯಭಾರದ ಎದುರಾಗಿ ನಿಯೋಜನೆ ಮೇಲೆ ಮರು ಹಂಚಿಕೆ ಮಾಡುವ ಷರತ್ತಿಗೊಳಪಟ್ಟಿದೆ.
6. ಸಂಸ್ಥೆಯ ಬೈಲಾದಲ್ಲಿ ನಿಗಧಿಪಡಿಸಿರುವಂತೆ ಆಡಳಿತ ಮಂಡಳಿಯ ಎಲ್ಲಾ ಪದಾಧಿಕಾರಿಗಳು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರೇ ಆಗಿರಬೇಕು. ಒಂದು ವೇಳೆ ಅನ್ಯ ವರ್ಗದ ವ್ಯಕ್ತಿಯನ್ನು ಆಡಳಿತ ಮಂಡಳಿಯ ಪದಾಧಿಕಾರಿಗಳಾಗಿ ಆಯ್ಕೆ ಮಾಡಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
7. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು, 2003ರ ನಿಯಮ 15(ಇ)ರಡಿಯಲ್ಲಿ ನಿಗದಿಪಡಿಸಿರುವ ಅಪೆಂಡಿಕ್ಸ್ (2)ರಲ್ಲಿ ಸೂಚಿಸಿರುವಂತೆ ಬೋಧನಾ ಕೊಠಡಿಗಳು, ಪ್ರಯೋಗಾಲಯಗಳು, ಶೌಚಾಲಯ ಇತ್ಯಾದಿಗಳನ್ನು ಒಳಗೊಂಡ ಮೂಲಭೂತ ಸೌಕರ್ಯಗಳನ್ನು ಸಂಸ್ಥೆಯು ಒದಗಿಸಿರತಕ್ಕದ್ದು.
8. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ನಡೆಸುತ್ತಿರುವ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಸಂದರ್ಭದಲ್ಲಿ ಅಂತಹ ಕಾಲೇಜುಗಳಲ್ಲಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಕನಿಷ್ಠ ಶೇಕಡಾ 35ರಷ್ಟು ಇರತಕ್ಕದ್ದು. ಪ್ರವೇಶಾವಕಾಶದಲ್ಲಿ ನಿಗದಿಪಡಿಸಿರುವ ವಿದ್ಯಾರ್ಥಿಗಳ ಕನಿಷ್ಠ ಪ್ರಮಾಣವನ್ನು ವಿವರವಾಗಿ ಅನುಸರಿಸತಕ್ಕದ್ದು. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
9. ವಿಶ್ವವಿದ್ಯಾಲಯದವರು ನಿಗದಿಪಡಿಸಿರುವ ಸರಾಸರಿ ಪ್ರವೇಶಾತಿಗೆ ಸಮಾನಾಂತರವಾಗಿ ಈ ಕಾಲೇಜುಗಳು ಕನಿಷ್ಠ ಪ್ರವೇಶಾತಿಯನ್ನು ಮಾಡಕೊಳ್ಳತಕ್ಕದ್ದು ಮತ್ತು ಪ್ರವೇಶಾತಿ (enrollment) ಪಡೆದ ಕಾಲೇಜಿನ ವಿದ್ಯಾರ್ಥಿಗಳ ಪೈಕಿ ಕನಿಷ್ಠ ಶೇಕಡ 75ರಷ್ಟು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತುಕೊಳ್ಳುವಂತೆ ಕ್ರಮವಹಿಸತಕ್ಕದ್ದು. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
10. ಇಂತಹ ಕಾಲೇಜುಗಳಲ್ಲಿನ ಪರೀಕ್ಷಾ ಫಲಿತಾಂಶಗಳು ಸಂಬಂಧಪಟ್ಟ ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ಇತರೆ ಕಾಲೇಜುಗಳಲ್ಲಿನ ಸರಾಸರಿ ಫಲಿತಾಂಶಕ್ಕಿಂತ ಕಡಿಮೆ ಇರತಕ್ಕದಲ್ಲ. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿನಗೊಳಪಟ್ಟಿದೆ.
11. ಈ ರೀತಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆದು ಪ್ರಾರಂಭವಾದ ಪದವಿ ಕಾಲೇಜುಗಳನ್ನು ಮಧ್ಯದಲ್ಲಿ ಯಾವುದೆ ವಿಚ್ಛಿನ್ನತೆ ಇಲ್ಲದೆ ಸತತವಾಗಿ ನಡೆಸಿರಬೇಕು. ವಿಚ್ಛಿನ್ನತೆ ಉಂಟಾದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
12. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ಮತ್ತು ಇತರ ಸಂಬಂಧಿತ ನಿಯಮಗಳಡಿಯಲ್ಲಿ ನಿಗಧಿಪಡಿಸಿರುವಂತೆ ಮಾದರಿ ಸಿಬ್ಬಂದಿಯನ್ವಯ ನೇಮಕಾತಿ ಮಾಡಿಕೊಳ್ಳತಕ್ಕದ್ದು. ಪ್ರತಿಯೊಂದು ತರಗತಿಯಲ್ಲಿ ನಿಗಧಿತ ಕನಿಷ್ಠ ಮಟ್ಟದ ವಿದ್ಯಾರ್ಥಿ ಹಾಜರಾತಿ ಸಂಖ್ಯಾಬಲವನ್ನು ಹೊಂದಿರತಕ್ಕದ್ದು. ಪದವಿ ಕಾಲೇಜುಗಳಿಗೆ ಸಂಬಂಧಪಟ್ಟಂತೆ ಪ್ರತಿಯೊಂದು ತರಗತಿಯಲ್ಲಿ ಕನಿಷ್ಠ 40 ವಿದ್ಯಾರ್ಥಿಗಳ ಹಾಜರಾತಿ ಕಡ್ಡಾಯವಾಗಿರಬೇಕು. ಭಾಷಾ ವಿಷಯದಲ್ಲಿ ಕನಿಷ್ಠ 10 ವಿದ್ಯಾರ್ಥಿಗಳು ಹಾಗೂ ಐಚ್ಛಿಕ ವಿಷಯಗಳಿಗೆ ಕನಿಷ್ಠ 15 ವಿದ್ಯಾರ್ಥಿಗಳ ಸಂಖ್ಯೆ ಇರಬೇಕು.
13. ನಿಗಧಿತ ಮೂಲಭೂತ ಸೌಲಭ್ಯಗಳಲ್ಲದೆ ಸ್ವಂತ ಕಟ್ಟಡ ಮತ್ತು ಆಟದ ಮೈದಾನಗಳನ್ನು ಹೊಂದಿರತಕ್ಕದ್ದು. ಇವುಗಳನ್ನು ಹೊಂದದೇ ಇರುವ ಸಂಸ್ಥೆಗಳ ಪ್ರಕರಣಗಳಲ್ಲಿ ಈ ಮೂಲಭೂತ ಸೌಲಭ್ಯಗಳನ್ನು ಹೊಂದಲು ಸಹಾಯಾನುದಾನಕ್ಕೆ ಒಳಪಡಿಸಿದ ದಿನಾಂಕದಿಂದ ಮೂರು ವರ್ಷಗಳ ಕಾಲಾವಕಾಶ ನೀಡಬಹುದು. ಹಾಗೂ ಮೂರು ವರ್ಷಗಳ ನಂತರವೂ ಈ ಸೌಲಭ್ಯಗಳನ್ನು ಒದಗಿಸದೇ ಇದ್ದಲ್ಲಿ ಸಹಾಯಾನುದಾನವನ್ನು ನಿಲ್ಲಿಸಲಾಗುವುದು.
14. ಇನ್ನು ಮುಂದೆ ಭವಿಷ್ಯಾನುಸಾರ ಭರ್ತಿ ಮಾಡಬೇಕಾಗಿರುವ ಹುದ್ದೆಗಳಿಗೆ ಸಕ್ಷಮ ಅಧಿಕಾರಿಯಿಂದ ಪೂರ್ವಾನುಮತಿ ಪಡೆಯದೇ ಮಾಡತಕ್ಕದ್ದಲ್ಲ.
15. ನೇರ ನೇಮಕಾತಿ, ಬಡ್ತಿ ಮತ್ತು ವಿದ್ಯಾರ್ಥಿಗಳ ಪ್ರವೇಶದ ವಿಷಯದಲ್ಲಿ ಕಾಲಕಾಲಕ್ಕೆ ಹೊರಡಿಸುವ ಸರ್ಕಾರದ ನಿಯಮಗಳು/ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
16. ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾದ ಬೋಧಕ ಹುದ್ದೆಗಳನ್ನು ತುಂಬುವಾಗ ಸರ್ಕಾರದ ಪೂರ್ವಾನುಮತಿ ಪಡೆಯುವುದು ಮತ್ತು ಸರ್ಕಾರದ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
17. ಅನುಮೋದಿತ ಹುದ್ದೆಗಳಿಗೆ ವೇತನಾನುದಾನ ಬಿಡುಗಡೆ ಮಾಡುವ ಮುನ್ನ ಸರ್ಕಾರದ ಮತ್ತು ಯುಜಿಸಿ ನಿಯಮಗಳ ಪ್ರಕಾರ ವಯೋಮಿತಿ:ವಿದ್ಯಾರ್ಹತೆ ಮತ್ತಿತರ ಷರತ್ತುಗಳನ್ನು ಪೂರೈಸಿರುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.
18. ಸದರಿ ಕಾಲೇಜಿನಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿರುವಂತಹ ಬೋಧಕರ ವೇತನವನ್ನು ಪ್ರಥಮ 5 ವರ್ಷಗಳ ಅವಧಿಗೆ ಇಲಾಖೆಗೆ ನಿಗದಿ ಪಡಿಸಲಾದ ಯೋಜನೆ ಹಂಚಿಕೆಯಲ್ಲಿಯೇ ವೆಚ್ಚ ಭರಿಸತಕ್ಕದ್ದು.

ಪ್ರತಿ ವರ್ಷವೂ ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವ ಕುರಿತು ಸಂಬಂಧಪಟ್ಟ ಜಂಟಿ ನಿರ್ದೇಶಕರು ದೃಢೀಕರಿಸಿದ ನಂತರವೇ ಆಯಾ ವರ್ಷದ ವೇತನಾನುದಾನ ಬಿಡುಗಡೆ ಮಾಡುವಂತೆ ಆಯುಕ್ತಾಲಯಕ್ಕೆ ಸೂಚಿಸಲಾಗಿದೆ. ನ್ಯೂನ್ಯತೆಗಳಾದಲ್ಲಿ ಸಂಬಂಧಪಟ್ಟ ಜಂಟಿ ನಿರ್ದೇಶಕರೇ ಜವಾಬ್ದಾರರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ:860/ವೆಚ್ಚ–8/2010, ದಿನಾಂಕ: 28–06–2011 ಮತ್ತು ಆಇ:864/ವೆಚ್ಚ–8/2010, ದಿನಾಂಕ: 02–07–2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಬಿ. ಉಳವಿ**

ಪಿ.ಆರ್. ನಂ. 2656

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಗೃಹ ಪರಿಚಾರಕ ಭತ್ಯೆಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 17 ಎಸ್‌ಆರ್‌ಪಿ (1) 61 ದಿನಾಂಕ: 27–02–1961.
2. ಸರ್ಕಾರಿ ಆದೇಶ ಸಂಖ್ಯೆ : ಡಿಪಿಎಆರ್ 73 ಸಿಡಿಎ 78 ದಿನಾಂಕ: 15–05–1980.
3. ಸರ್ಕಾರಿ ಆದೇಶ ಸಂಖ್ಯೆ : ಡಿಪಿಎಆರ್ 40 ಸಿಡಿಎ 85 (ಪಿ) ದಿನಾಂಕ: 02–05–1987.
4. ಸರ್ಕಾರಿ ಆದೇಶ ಸಂಖ್ಯೆ : ಡಿಪಿಎಆರ್ 34 ಸಿಸೇನಿ 96 ದಿನಾಂಕ: 24–04–1997.
5. ಸರ್ಕಾರಿ ಆದೇಶ ಸಂಖ್ಯೆ : ಡಿಪಿಎಆರ್ 34 ಸಿಸೇನಿ 96 ದಿನಾಂಕ: 16–09–1997.
6. ತಿದ್ದುಪಡಿ ಆದೇಶ ಸಂಖ್ಯೆ : ಸಿಆಸುಇ 34 ಸಿಸೇನಿ 96 ದಿನಾಂಕ: 01–06–1998.
7. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 196 ಸಿಸೇನಿ 2001, ದಿನಾಂಕ: 06–06–2006.

**ಪ್ರಸ್ತಾವನೆ :**

ಮೇಲೆ (7) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸರ್ಕಾರದ ವಿವಿಧ ವರ್ಗದ ಅಧಿಕಾರಿಗಳಿಗೆ ಮಾಸಿಕ ರೂ. 1500/–ಗಳ ಗೃಹ ಪರಿಚಾರಕೆ ಭತ್ಯೆಯನ್ನು ನಿಗದಿಗೊಳಿಸಲಾಗಿದೆ. ಗೃಹ ಪರಿಚಾರಿಕೆ ಭತ್ಯೆಯನ್ನು ಪರಿಷ್ಕರಿಸಲು ಮನವಿಗಳು ಸ್ವೀಕೃತವಾಗಿರುವ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಭತ್ಯೆಯನ್ನು ವಿವಿಧ ವರ್ಗದ ಅಧಿಕಾರಿಗಳಿಗೆ ಪರಿಷ್ಕರಿಸಿ ಹೆಚ್ಚಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 232 ಸಿಸೇನಿ 2011, ಬೆಂಗಳೂರು, ದಿನಾಂಕ: 22 ನೇ ಅಕ್ಟೋಬರ್ 2011.**

ಸರ್ಕಾರದ ವಿವಿಧ ವರ್ಗದ ಅಧಿಕಾರಿಗಳಿಗೆ ನೀಡುತ್ತಿರುವ ಗೃಹ ಪರಿಚಾರಕ ಭತ್ಯೆಯ ದರಗಳನ್ನು ಈ ಕೆಳಗಿನಂತೆ ಹೆಚ್ಚಿಸಲು ಸರ್ಕಾರವು ಮಂಜೂರಾತಿ ನೀಡಿದೆ.

| ಕ್ರಮ ಸಂಖ್ಯೆ | ಅಧಿಕಾರಿ ವರ್ಗ | ಗೃಹ ಪರಿಚಾರಕ ಭತ್ಯೆ |
|---|---|---|
| 1. | ಮುಖ್ಯ ಕಾರ್ಯದರ್ಶಿಗಳು/ಅಪರ ಮುಖ್ಯ ಕಾರ್ಯದರ್ಶಿಗಳು | ಮಾಸಿಕ ರೂ. 8000/– |
| 2. | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು | ಮಾಸಿಕ ರೂ. 6000/– |
| 3. | ಸರ್ಕಾರದ ಕಾರ್ಯದರ್ಶಿಗಳು | ಮಾಸಿಕ ರೂ. 5000/– |
| 4. | ಇಲಾಖಾ ಮುಖ್ಯಸ್ಥರು | ಮಾಸಿಕ ರೂ. 3000/– |

ಈ ಆದೇಶವು ದಿನಾಂಕ : 01–10–2011 ರಿಂದ ಜಾರಿಗೆ ಬರುತ್ತದೆ.

ಅಧಿಕಾರಿಗಳ ನಿವಾಸಕ್ಕೆ ಕಛೇರಿಯಿಂದ ಗೃಹಚಾರಕನನ್ನ ಒದಗಿಸದಿದ್ದಲ್ಲಿ ಮಾತ್ರ ಈ ಭತ್ಯೆಯನ್ನು ನೀಡಲಾಗುವುದು. ಈ ಭತ್ಯೆಯನ್ನು ಮಂಜೂರು ಮಾಡಲು ಈ ಹಿಂದೆ ವಿಧಿಸಿರುವ ಇತರೆ ನಿರ್ಬಂಧಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಈ ಆದೇಶವನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ : ಎಫ್‌ಡಿ 10 ಎಸ್‌ಆರ್‌ಪಿ 2011 ದಿನಾಂಕ : 06–08–2011 ರಲ್ಲಿನ ಆರ್ಥಿಕ ಇಲಾಖೆಯ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್.2671

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಆಡಳಿತ–3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದಲ್ಲಿ 'ಕರ್ನಾಟಕ ರಾಜ್ಯ ತರಬೇತಿ ನೀತಿ' ಯನ್ನು ಜಾರಿಗೆ ತರುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 87 ಇಆತ 2009 ದಿನಾಂಕ : 07–10–2011.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಕಾರ್ಯ ದಕ್ಷತೆಯನ್ನು ಉತ್ತಮಗೊಳಿಸುವುದಕ್ಕಾಗಿ ಅಗತ್ಯ ತರಬೇತಿ ನೀಡುವ ಉದ್ದೇಶದಿಂದ 'ಕರ್ನಾಟಕ ರಾಜ್ಯ ತರಬೇತಿ ನೀತಿ' ಯನ್ನು ಜಾರಿಗೆ ತರಲಾಗಿದೆ.

ಸದರಿ ತರಬೇತಿ ನೀತಿಯಲ್ಲಿ ರಾಜ್ಯ ತರಬೇತಿ ನೀತಿಯನ್ನು ಸೂಕ್ತವಾಗಿ ಜಾರಿಗೊಳಿಸಲು ಮತ್ತು ಕಾರ್ಯಸಾಧನೆಯ ಮೇಲ್ವಿಚಾರಣೆ ನಡೆಸಿ, ಸೂಕ್ತ ಮಾರ್ಗದರ್ಶನ ನೀಡುವುದಕ್ಕಾಗಿ ಕರ್ನಾಟಕ ರಾಜ್ಯ ತರಬೇತಿ ಪರಿಷತ್ತು ಮತ್ತು ಉನ್ನತಾಧಿಕಾರದ ಸಮನ್ವಯ ಸಮಿತಿಯನ್ನು ರಚಿಸಲು ಹೇಳಲಾಗಿದೆ. ಅದರಂತೆ ಸಮಿತಿ ರಚಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 87 ಇಆತ 2009, ಬೆಂಗಳೂರು, ದಿನಾಂಕ: 9 ನೇ ನವಂಬರ್ 2011.**

ಕರ್ನಾಟಕ ಸರ್ಕಾರದಲ್ಲಿ 'ಕರ್ನಾಟಕ ರಾಜ್ಯ ತರಬೇತಿ ನೀಡಿ' ಯನ್ನು ಸೂಕ್ತವಾಗಿ ಜಾರಿಗೊಳಿಸಲು ಮತ್ತು ಕಾರ್ಯಸಾಧನೆಯ ಮೇಲ್ವಿಚಾರಣೆ ನಡೆಸಲು ಕರ್ನಾಟಕ ರಾಜ್ಯ ತರಬೇತಿ ಪರಿಷತ್ತು ಮತ್ತು ಉನ್ನತಾಧಿಕಾರದ ಸಮನ್ವಯ ಸಮಿತಿಯನ್ನು ಈ ಕೆಳಗಿನಂತೆ ರಚಿಸಲಾಗಿದೆ:

**ಕರ್ನಾಟಕ ರಾಜ್ಯ ತರಬೇತಿ ಪರಿಷತ್ತು:**

| | | |
|---|---|---|
| 1. | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | ಅಧ್ಯಕ್ಷರು |
| 2. | ಅಪರ ಮುಖ್ಯ ಕಾರ್ಯದರ್ಶಿಗಳು | ಸದಸ್ಯರು |
| 3. | ಅಪರ ಮುಖ್ಯ ಕಾರ್ಯದರ್ಶಿಗಳು ಮತ್ತು ಅಭಿವೃದ್ಧಿ ಆಯುಕ್ತರು | ಸದಸ್ಯರು |
| 4. | ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಸದಸ್ಯರು |
| 5. | ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 6. | ಪ್ರಧಾನ ಕಾರ್ಯದರ್ಶಿಗಳು, ಯೋಜನಾ ಇಲಾಖೆ | ಸದಸ್ಯರು |
| 7. | ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | ಸದಸ್ಯರು |
| 8. | ಮಹಾ ನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು | ಸದಸ್ಯರು |
| 9. | ನಿರ್ದೇಶಕರು, ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆ ಸಂಸ್ಥೆ, ಬೆಂಗಳೂರು | ಸದಸ್ಯರು |
| 10. | ನಿರ್ದೇಶಕರು, ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್, ಬೆಂಗಳೂರು | ಸದಸ್ಯರು |
| 11. | ಅಧ್ಯಕ್ಷರು, ಇಂಡಿಯನ್ ಇನ್ಸ್ಟಿಟ್ಯೂಟ್ ಆಫ್ ಪಬ್ಲಿಕ್ ಅಡ್ಮಿನಿಸ್ಟ್ರೇಷನ್ | ಸದಸ್ಯರು |
| 12. | ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ (ಆಡಳಿತ ಸುಧಾರಣೆ) | ಸದಸ್ಯ ಕಾರ್ಯದರ್ಶಿ |

**ಆಹ್ವಾನಿತರು :**

1. ಪ್ರಧಾನ ಕಾರ್ಯದರ್ಶಿಗಳು, ಗೃಹ ಇಲಾಖೆ
2. ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
3. ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ
4. ಪ್ರಧಾನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ
5. ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ
6. ಪ್ರಧಾನ ಕಾರ್ಯದರ್ಶಿಗಳು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ
7. ನಿರ್ದೇಶಕರು, ನ್ಯಾಷನಲ್ ಲಾ ಸ್ಕೂಲ್ ಆಫ್ ಇಂಡಿಯಾ, ಬೆಂಗಳೂರು
8. ನಿರ್ದೇಶಕರು, ಫಿಸ್ಕಲ್ ಪಾಲಿಸಿ ಇನ್ಸ್ಟಿಟ್ಯೂಟ್, ಬೆಂಗಳೂರು
9. ಅಧ್ಯಕ್ಷರು, ತರಬೇತಿ ಕಾರ್ಯಕ್ಷೇತ್ರದಲ್ಲಿ ಸಾಕಷ್ಟು ಕೊಡುಗೆಗಳನ್ನು ನೀಡಿರುವ ಯಾರನ್ನಾದರೂ ಸದಸ್ಯರನ್ನಾಗಿ ಸೇರಿಸಿಕೊಳ್ಳಬಹುದು.
10. ನಿರ್ದೇಶಕರು, ಸೆಂಟರ್ ಫಾರ್ ಗುಡ್ ಗವರ್ನೆನ್ಸ್ ಹೈದರಾಬಾದ್.

**ರಾಜ್ಯ ತರಬೇತಿ ಪರಿಷತ್ತಿನ ಕರ್ತವ್ಯಗಳು ಮತ್ತು ಜವಾಬ್ದಾರಿಗಳು :**

ಈ ಪರಿಷತ್ತು, ರಾಜ್ಯ ತರಬೇತಿ ನೀತಿಯನ್ನು ಅನುಷ್ಠಾನಗೊಳಿಸುವಲ್ಲಿ ಸರ್ಕಾರಕ್ಕೆ ಸಲಹೆ ಹಾಗೂ ಮಾರ್ಗದರ್ಶನಗಳನ್ನು ನೀಡುವುದು. ರಾಜ್ಯ ತರಬೇತಿಗೆ ಸಂಬಂಧಿಸಿದ ತರಬೇತಿಯ ರೂಪುರೇಷೆಗಳು; ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ಹಾಗೂ ಅವುಗಳನ್ನು ಅನುಷ್ಠಾನಗೊಳಿಸುವಲ್ಲಿ ಸರ್ಕಾರಕ್ಕೆ ಸಲಹೆ ನೀಡುವುದು.

**ಉನ್ನತಾಧಿಕಾರದ ಸಮನ್ವಯ ಸಮಿತಿ :**

| | |
|---|---|
| ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ | ಅಧ್ಯಕ್ಷರು |
| ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿ.ಆ.ಸು.ಇ. (ಆಡಳಿತ ಸುಧಾರಣೆ) | ಸದಸ್ಯರು |
| ಮಹಾ ನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು | ಸದಸ್ಯರು |
| ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | ಸದಸ್ಯರು |

ಉಪಕಾರ್ಯದರ್ಶಿಗಳು, ಸಿ.ಆ.ಸು.ಇ. (ಆ.ಸು). ಸದಸ್ಯ ಕಾರ್ಯದರ್ಶಿಗಳು

**ಉನ್ನತಾಧಿಕಾರದ ಸಮನ್ವಯ ಸಮಿತಿಯ ಕರ್ತವ್ಯಗಳು ಮತ್ತು ಜವಾಬ್ದಾರಿಗಳು :**

- ಉನ್ನತಾಧಿಕಾರದ ಸಮನ್ವಯ ಸಮಿತಿಯು ನೋಡಲ್ ಏಜೆನ್ಸಿಯಾಗಿ ರಾಜ್ಯ ತರಬೇತಿ ಪರಿಷತ್ತಿಗೆ ಸಹಕರಿಸುವುದು;
- ರಾಜ್ಯ ತರಬೇತಿ ನೀತಿಯ ಅನುಷ್ಠಾನಗೊಳಿಸುವಲ್ಲಿ ಮೇಲ್ವಿಚಾರಣೆ ನಡೆಸುವುದು;
- ಪ್ರತಿಯೊಂದು ಇಲಾಖೆಯು ವಾರ್ಷಿಕ ಕ್ರಿಯಾ ಯೋಜನೆಯಲ್ಲಿ ತರಬೇತಿಗೆ ಸಂಬಂಧಿಸಿದಂತೆ ರೂಪರೇಷೆಗಳನ್ನು ರಚಿಸಿದೆಯೇ ಎಂಬುದನ್ನು ಗಮನಿಸುವುದು;

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್.2672 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಆಸು–ತರಬೇತಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ ಪರಿಸರ ಜೀವಿಶಾಸ್ತ್ರ ಇಲಾಖೆಗೆ ಪ್ರತ್ಯೇಕ ಕಾನೂನು ಕೋಶವನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಅರಣ್ಯ ಪರಿಸರ ಜೀವಿಶಾಸ್ತ್ರ ಇಲಾಖೆಯ ಕಡತ ಸಂಖ್ಯೆ : ಅಪಜೀ 13 ಸಿಆರ್‌ಎಸ್ 2011.

**ಪ್ರಸ್ತಾವನೆ :**

ಮೇಲೆ ಓದಲಾದ ಕಡತದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಅರಣ್ಯ ಪರಿಸರ ಜೀವಿಶಾಸ್ತ್ರ ಇಲಾಖೆ) ರವರು ಅರಣ್ಯ ಪರಿಸರ ಜೀವಿಶಾಸ್ತ್ರ ಇಲಾಖೆಗೆ ಸಂಬಂಧಿಸಿದಂತೆ, ಪ್ರಸ್ತುತ ಇರುವ ಕಾನೂನು ಕೋಶದಲ್ಲಿ ನಗರಾಭಿವೃದ್ಧಿ, ಇಂಧನ ಮತ್ತು ಅರಣ್ಯ ಪರಿಸರ ಜೀವಿಶಾಸ್ತ್ರ ಇಲಾಖೆಗಳ ವಿಷಯಗಳನ್ನು ನಿರ್ವಹಿಸಲಾಗುತ್ತಿದ್ದು ಈ ಪೈಕಿ ಅರಣ್ಯ ಪರಿಸರ ಜೀವಿಶಾಸ್ತ್ರ ಇಲಾಖೆಯು ಬೃಹತ್ ಇಲಾಖೆಯಾಗಿದ್ದು ನ್ಯಾಯಾಲಯದ ಪ್ರಕರಣಗಳು ಹೆಚ್ಚಾಗಿರುವುದರಿಂದ ಈ ಇಲಾಖೆಗೆ ಪ್ರತ್ಯೇಕ ಕಾನೂನು ಕೋಶವನ್ನು ಸೃಜಿಸಬೇಕೆಂದು ಪ್ರಸ್ತಾಪಿಸಿರುತ್ತಾರೆ. ಈ ಬಗ್ಗೆ ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 480 ಸಅಸೇ2011, ಬೆಂಗಳೂರು ದಿನಾಂಕ: 10ನೇ ನವೆಂಬರ್ 2011.**

ಕರ್ನಾಟಕ ಸರ್ಕಾರ ಸಚಿವಾಲಯದ ನಗರಾಭಿವೃದ್ಧಿ, ಇಂಧನ ಮತ್ತು ಅರಣ್ಯ ಪರಿಸರ ಜೀವಿಶಾಸ್ತ್ರ ಇಲಾಖೆಗಳನ್ನೊಳಗೊಂಡಂತೆ ಇರುವ ಕಾನೂನು ಕೋಶವನ್ನು ಪ್ರತ್ಯೇಕಿಸಿ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಗೆ ಒಂದು ಪ್ರತ್ಯೇಕ ಕಾನೂನು ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

| | | |
|---|---|---|
| 1 | ಕಾನೂನು ಕೋಶದ ಮುಖ್ಯಸ್ಥರು<br>(ಜಿಲ್ಲಾ ನ್ಯಾಯಾಧೀಶರಿಂದ ನಿಯೋಜನೆ) | 01 ಹುದ್ದೆ |
| 2 | ಸರ್ಕಾರದ ಅಧೀನ ಕಾರ್ಯದರ್ಶಿ | 01 ಹುದ್ದೆ |
| 3 | ಶೀಘ್ರಲಿಪಿಗಾರರು | 02 ಹುದ್ದೆ |
| 4 | ಸಹಾಯಕರು | 01 ಹುದ್ದೆ |
| 5 | ದಲಾಯತ್ | 02 ಹುದ್ದೆ |
| | ಒಟ್ಟು | 07 ಹುದ್ದೆಗಳು |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 885 ವೆಚ್ಚ 12/2011, ದಿನಾಂಕ : 19–10–2011 ರಲ್ಲಿ ನೀಡಿರುವ ಸಹಮತಿ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್.2673 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು–ಇ)

## ಕಂದಾಯ ಸಚಿವಾಲಯ

### ಸುತ್ತೋಲೆ

**ಸಂಖ್ಯೆ : ಆರ್ ಡಿ 569 ಟಿಆರ್ ಎಂ 2011 ಬೆಂಗಳೂರು, ದಿನಾಂಕ 28ನೆ ಅಕ್ಟೋಬರ್ 2011**

ಕಂದಾಯ ಇಲಾಖೆಗೆ ಸಂಬಂಧಿಸಿದ ನ್ಯಾಯಾಲಯ ಪ್ರಕರಣಗಳ ವಿಚಾರಣೆಯ ಸಂದರ್ಭದಲ್ಲಿ ಸಂಬಂಧಿಸಿದ ಕಡತಗಳು, ಕಂದಾಯ ದಾಖಲೆಗಳು ನಾಪತ್ತೆಯಾಗಿರುವುದು ಕಂಡುಬರುತ್ತಿದೆ. ದಾಖಲೆಗಳ ನಾಪತ್ತೆ ಪ್ರಕರಣಗಳನ್ನು ಕರ್ನಾಟಕ ಉಚ್ಚನ್ಯಾಯಾಲಯವು ಗಂಭೀರವಾಗಿ ಪರಿಗಣಿಸಿದ್ದು, ಎಲ್ಲಾ ತಹಸೀಲ್ದಾರರು, ಉಪವಿಭಾಗಾಧಿಕಾರಿಗಳು ಮತ್ತು ಜಿಲ್ಲಾಧಿಕಾರಿಗಳ ಕಛೇರಿಗಳಿಗೂ ಲಭ್ಯವಿರುವ ಎಲ್ಲಾ ಕಂದಾಯ ದಾಖಲೆಗಳ ಪಟ್ಟಿ ಮಾಡುವಂತೆ ಹಾಗೂ ನಾಪತ್ತೆಯಾದ ದಾಖಲೆಗಳ ಪಟ್ಟಿ ಮಾಡಿ, ದಾಖಲೆಗಳನ್ನು ಪುನರ್‌ನಿರ್ಮಿಸುವಂತೆಯೂ, ನಾಪತ್ತೆಯಾಗಲು/ನಾಶವಾಗಲು ಕಾರಣರಾದ ಅಧಿಕಾರಿ/ಸಿಬ್ಬಂದಿ ವರ್ಗದವರ ಮೇಲೆ ಕಾನೂನು ಕ್ರಮ ಕೈಗೊಳ್ಳುವಂತೆಯೂ ನಿರ್ದೇಶನ ನೀಡಿದೆ.

ಆದ್ದರಿಂದ, ಎಲ್ಲಾ ತಹಸೀಲ್ದಾರರು, ಉಪವಿಭಾಗಾಧಿಕಾರಿಗಳು ಮತ್ತು ಜಿಲ್ಲಾಧಿಕಾರಿಗಳ ಕಛೇರಿಗಳಲ್ಲಿ ಲಭ್ಯವಿರುವ ಎಲ್ಲಾ ಕಂದಾಯ ದಾಖಲೆಗಳ ಪಟ್ಟಿ ಮಾಡುವಂತೆ ಹಾಗೂ ನಾಪತ್ತೆಯಾದ ದಾಖಲೆಗಳ ಪಟ್ಟಿ ಮಾಡಿ, ಕಡತ ಕಳೆದು ಹೋಗಿರುವ ಬಗ್ಗೆ ಮೊದಲಿಗೆ ಪೊಲೀಸ್ ಠಾಣೆಯಲ್ಲಿ ದೂರು ದಾಖಲಿಸುವುದು ಮತ್ತು ತದನಂತರ ನಿಮಯಾನುಸಾರ ದಾಖಲೆಗಳನ್ನು ಪುನರ್‌ನಿರ್ಮಿಸುವಂತೆಯೂ, ನಾಪತ್ತೆಯಾಗಲು/ನಾಶವಾಗಲು ಕಾರಣರಾದ ಅಧಿಕಾರಿ/ಸಿಬ್ಬಂದಿ ವರ್ಗದವರ ಮೇಲೆ ಇಲಾಖಾ ವಿಚಾರಣೆ ನಡೆಸಿ, ಕಾನೂನು ಕ್ರಮ ಕೈಗೊಳ್ಳಲು ಸೂಕ್ತ ಕ್ರಮವಹಿಸುವಂತೆ ಸೂಚಿಸಲಾಗಿದೆ.

ಈ ಪ್ರಕಾರ ತೆಗೆದುಕೊಂಡ ಕ್ರಮದ ಬಗ್ಗೆ ಇರಡು ತಿಂಗಳೊಳಗಾಗಿ ಸಂಬಂಧಿಸಿದ ಪ್ರಾದೇಶಿಕ ಆಯುಕ್ತರಿಗೆ ವರದಿಯನ್ನು ಸಲ್ಲಿಸತಕ್ಕದ್ದು. ಕ್ರೋಢೀಕೃತ ವರದಿಯನ್ನು ಎಲ್ಲಾ ಪ್ರಾದೇಶಿಕ ಆಯುಕ್ತರು ಮೂರು ತಿಂಗಳೊಳಗಾರಿಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಕಂದಾಯ)

ಪಿ.ಆರ್.2674

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಡಿ. ವಿ. ನರಸಿಂಹಯ್ಯ, ನಿವೃತ್ತ ತಹಶೀಲ್ದಾರ್, ಇವರ ವಿರುದ್ಧದ ದಂಡನೆ ಆದೇಶವನ್ನು ರದ್ದುಗೊಳಿಸುವ ಕುರಿತು

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು, ಕೋಲಾರ ಇವರ ಪತ್ರ ಸಂಖ್ಯೆ ಇಎಸ್‌ಟಿ : 01 : ಸಿಆರ್ 55 : 95–96, ದಿನಾಂಕ: 03–06–1995

2. ವಿಭಾಗಾಧಿಕಾರಿಗಳು, ಬೆಂಗಳೂರು ಇವರ ವಿಚಾರಣಾ ವರದಿ ಸಂಖ್ಯೆ : ಸಿಸಿಎ 11 : 95–96, ದಿನಾಂಕ: 21–10–1997
3. ಸರ್ಕಾರದ ಆದೇಶ ಸಂಖ್ಯೆ : ಕಂಇ 53 ಎಡಿಇ 95, ದಿನಾಂಕ: 12–04–2001
4. ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ : 5486/2002ರ ದಿನಾಂಕ: 30–03–2011ರ ಅಂತಿಮ ಆದೇಶ

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ : 30–06–1995ರ ಪತ್ರದಲ್ಲಿ ಕೋಲಾರ ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಗುಡಿಬಂಡೆ ತಾಲ್ಲೂಕು, ಕಸಬಾ ಹೋಬಳಿ, ಚೌಟಕುಂಟನ ಹಳ್ಳಿ ಗ್ರಾಮದ ಸರ್ವೆ ನಂ. 52 ಕ್ಕೆ ಬದಲಾಗಿ 53 ರಲ್ಲಿ ಶ್ರೀ ಆದಿನಾರಾಯಣಪ್ಪ ಎಂಬುವವರಿಗೆ ಜಮೀನು ಮಂಜೂರಾತಿ ತಿದ್ದುಪಡಿ ಆದೇಶ ನೀಡುವಲ್ಲಿ ಇತರರೊಂದಿಗೆ ಶ್ರೀ ಡಿ. ವಿ. ನರಸಿಂಹಯ್ಯ, ಹಿಂದಿನ ತಹಶೀಲ್ದಾರ್ (ಈಗ ನಿವೃತ್ತ) ಇವರು ಸಹಭಾಗಿಯಾಗಿ ತೀವ್ರ ತರವಾದ ಕರ್ತವ್ಯಲೋಪಗಳನ್ನು ಎಸಗಿರುವ ಬಗ್ಗೆ ವರದಿ ಮಾಡಿದ್ದರ ಹಿನ್ನಲೆಯಲ್ಲಿ ಸದರಿಯವರ ಲಿಖಿತ ಸಮಜಾಯಿಷಿಯನ್ನು ಅಪೇಕ್ಷಿಸಿ ತಿಳುವಳಿಕೆ ಪತ್ರವನ್ನು ದಿನಾಂಕ : 24–06–1995 ರಲ್ಲಿ ಜಾರಿ ಮಾಡಲಾಗಿತ್ತು. ಇದಕ್ಕೆ ಶ್ರೀಯುತರು ತಮ್ಮ ದಿನಾಂಕ : 02–08–1995 ರ ತಮ್ಮ ಲಿಖಿತ ಹೇಳಿಕೆಯಲ್ಲಿ ತಮ್ಮ ಮೆಲಿನ ಆಪಾದನೆಗಳನ್ನು ಅಲ್ಲಗೆಳೆದು ಉದ್ದೇಶಿತ ವಿಚಾರಣೆಯನ್ನು ಕೈಬಿಡುವಂತೆ ಕೋರಿದ್ದರು. ಆಪಾದಿತ ಅಧಿಕಾರಿಯು ಅವರ ವಿರುದ್ಧ ಮಾಡಲಾದ ಆರೋಪವನ್ನು ಒಪ್ಪಿಕೊಳ್ಳದೇ ಮತ್ತು ಅದಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಸಲ್ಲಿಸದಿದ್ದುದರಿಂದ ಹಾಗೂ ಅವರ ಲಿಖಿತ ಹೇಳಿಕೆಯನ್ನು ಯಾವುದೇ ಸತ್ಯಾಂಶ ಇಲ್ಲದ್ದರಿಂದ ಸರ್ಕಾರದ ಆದೇಶ ಸಂಖ್ಯೆ : ಕಂಇ 53 ಎಡಿಇ 1995, ದಿ : 07–10–1995 ರ ಆದೇಶದಲ್ಲಿ ಬೆಂಗಳೂರು ಉಪ ವಿಭಾಗಾಧಿಕಾರಿಗಳನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅದರಂತೆ, ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಜರುಗಿಸಿ, ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ದಿ : 21–10–1997 ರ ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿಗಳ ವಿರುದ್ಧ ಆರೋಪಗಳು ಸಾಬೀತಾಗಿರುತ್ತದೆಯೆಂದು ವರದಿ ನೀಡಿದ್ದರು.

ಆರೋಪಿತ ಅಧಿಕಾರಿ ಶ್ರೀ ಡಿ. ವಿ. ನರಸಿಂಹಯ್ಯನವರು ಪ್ರಶ್ನಿತ ಜಮೀನಿನಲ್ಲಿ ಕಲ್ಲುಬಂಡೆ ನಿಕ್ಷೇಪ ಇದೆ ಎಂದು ರಾಜಸ್ವ ನಿರೀಕ್ಷಕರು ವರದಿ ಮಾಡಿದ್ದರೂ ಸಹ, ಮೇಲಾಗಿ ಈ ಜಮೀನು ಕೆರೆ ಅಂಗಳವೆಂದು ಮತ್ತು ಅರಣ್ಯಕ್ಕೆ ಮೀಸಲಿಟ್ಟ ಜಮೀನೆಂದು ವರದಿಯಿಂದ ತಿಳಿದಿದ್ದರೂ ಸಹ, ಅದನ್ನು ಮರೆಮಾಚಿ ಉಪ ವಿಭಾಗಾಧಿಕಾರಿಗಳಿಗೆ ಸರ್ವೆ ನಂ. 52ಕ್ಕೆ ಬದಲಾಗಿ 53 ರಲ್ಲಿ ಶ್ರೀ ಆದಿ ನಾರಾಯಣಪ್ಪನವರು ಅನುಭವಿಸುತ್ತಿದ್ದಾರೆಂದು ಸುಳ್ಳು ವರದಿ ನೀಡಿ ಎ.ಸಿ.ಯವರಿಂದ ತಿದ್ದುಪಡಿ ಆದೇಶವಾದ ತಕ್ಷಣವೇ ಆತನಿಗೆ ಸಾಗುವಳಿ ಚೀಟಿಯನ್ನು ನೀಡಿ ಮತ್ತು ಸದರಿ ಜಮೀನಿನಲ್ಲಿ ಇದ್ದ ಬಂಡೆಗೆ ಕ್ವಾರಿ ಲೈಸೆನ್ಸನ್ನೂ ನೀಡಿರುವುದು ಇವರ ದುರುದ್ದೇಶವಾಗಿರುವುದು ಸ್ಪಷ್ಟವಾಗಿ ವರದಿಯಿಂದ ತಿಳಿದು ಬರುತ್ತದೆ. ಆದ್ದರಿಂದ, ಇವರಿಗೆ ದಂಡನೆ ವಿಧಿಸಲು ನಿರ್ಧರಿಸಿ, ಶ್ರೀಯುತರು ವಯೋನಿವೃತ್ತಿ ಹೊಂದಿದ್ದರಿಂದ 1958 ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಲ್ಲಿ ಕ್ರಮ ಕೈಗೊಳ್ಳಲು ಆರೋಪಿತ ಅಧಿಕಾರಿಗಳಿಗೆ ದಿ: 07–12–1997ರಲ್ಲಿ 2ನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಅದರಂತೆ, ಅವರು ದಿ: 14–02–1998 ರ ತಮ್ಮ ಲಿಖಿತ ಹೇಳಿಕೆಯಲ್ಲಿ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಳ್ಳದೇ ನಿರಾಕರಿಸಿದ್ದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ದಿ: 12–04–2011 ರ ಆದೇಶದಲ್ಲಿ 1958 ರ ನಾಗರೀಕ ಸೇವಾ ನಿಯಮಗಳ ನಿಯಮ 214 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಡಿ. ವಿ. ನರಸಿಂಹಯ್ಯ, ನಿವೃತ್ತ ತಹಶೀಲ್ದಾರ್, ಇವರ ನಿವೃತ್ತಿ ವೇತನದಲ್ಲಿ ಮಾಹೆಯಾನ ರೂ. 300–00 (ಮೂರು ನೂರು ರೂಪಾಯಿಗಳು ಮಾತ್ರ) ಗಳನ್ನು ಶಾಶ್ವತವಾಗಿ ದಂಡನೆಯಾಗಿ ಕಡಿತಗೊಳಿಸಲು ಆದೇಶಿಸಲಾಗಿತ್ತು.

ಆದರೆ, ಶ್ರೀ ಡಿ. ವಿ. ನರಸಿಂಹಯ್ಯ, ನಿವೃತ್ತ ತಹಶೀಲ್ದಾರ್ ರವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಸದರಿ ದಂಡನೆ ಆದೇಶವನ್ನು ಪ್ರಶ್ನಿಸಿ ಅರ್ಜಿ ಸಂಖ್ಯೆ : 5486/2002 ನ್ನು ದಾಖಲಿಸಿದ್ದರು. ಇದನ್ನು ವಿಚಾರಣೆ ಮಾಡಿದ ಮಾನ್ಯ ಕರ್ನಾಟಕ ನ್ಯಾಯ ಮಂಡಳಿಯು ತನ್ನ ಡಿ: 30–03–2011 ರ ಆದೇಶದಲ್ಲಿ ಈ ಕೆಳಗಿನಂತೆ ಆದೇಶಿಸಿದೆ.

1. The Application is allowed :
2. The enquiry report No. CCA 11/95-96 dated 16-10-1997 passed by the 2[nd] Respondent (Annexure-At) is ordered to be set aside in so far as the Applicant is concerned :

3. The impugned order No. RD 53 ADE 95 dated 12-04-2001 passed by the 1st Respondent (Annexure-A8) and the letter bearing No. PV : 1/R3/R4 1298/2001-02/168 dated 15/18-02-2001 issued by the 4th Respondent are set aside :
4. Consequently, the Applicant is entitiled to all the consequential benefits asper Rules and the 1st Respondent is directed to settle the benefits due as per rules :
5. Time for compliance of this order is 3 months from the date of receipt of a certified copy of this order by the Respondents.

ಸದರಿ ಮಾನ್ಯ ಕರ್ನಾಟಕ ನ್ಯಾಯ ಮಂಡಳಿಯ ಆದೇಶವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರದ ಆದೇಶ ಸಂಖ್ಯೆ : ಕಂಇ 53 ಎಡಿಇ 95, ದಿ: 12–04–2001 ರ ಆದೇಶವನ್ನು ರದ್ದುಪಡಿಸಲು ಸರ್ಕಾರವು ನಿರ್ಧರಿಸಿರುವುದರಿಂದ ಈ ಕಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 25 ಎಡಿಇ 2002, ಬೆಂಗಳೂರು, ದಿನಾಂಕ: 26 ನೇ ಸೆಪ್ಟೆಂಬರ್ 2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಡಿ. ವಿ. ನರಸಿಂಹಯ್ಯ, ನಿವೃತ್ತ ತಹಶೀಲ್ದಾರ್, ಇವರಿಗೆ ದಂಡನೆ ವಿಧಿಸಿದ ಸರ್ಕಾರದ ಆದೇಶ ಸಂಖ್ಯೆ : ಕಂಇ 53 ಎಡಿಇ 95, ದಿ: 12–04–2001 ರ ಆದೇಶವನ್ನು ರದ್ದುಪಡಿಸಿ ಆದೇಶಿಸಿದೆ.

ಶ್ರೀ ಡಿ. ವಿ. ನರಸಿಂಹಯ್ಯ, ನಿವೃತ್ತ ತಹಶೀಲ್ದಾರ್, ಇವರು ಸದರಿ ಇಲಾಖಾ ವಿಚಾರಣೆ ನಡೆಯದಿದ್ದರೆ ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಆ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಗೋಪಾಲಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್.2675

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಆಲೂರು ಕಂದಾಯ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಆಲೂರು ತಾಲ್ಲೂಕಿನ ಗ್ರಾಮಸ್ಥರ ಮನವಿ ದಿನಾಂಕ : 28–04–2011.
2. ಸರ್ಕಾರದ ಪತ್ರ ಸಂಖ್ಯೆ : ಲಾ 180 ಎಲ್‌ಸಿಎಲ್ 2011, ದಿನಾಂಕ : 30–06–2011, 14–09–2011.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರ ಪತ್ರ ಸಂಖ್ಯೆ 3874/2011, ದಿನಾಂಕ : 30–08–2011.
4. ಜಿಲ್ಲಾಧಿಕಾರಿ, ಹಾಸನ ಇವರ ಪತ್ರ ಸಂಖ್ಯೆ : ಎಂಎಜಿ/140/2011–12, ದಿನಾಂಕ : 24–09–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 28–04–2011ರ ಮನವಿಯಲ್ಲಿ ಆಲೂರು ತಾಲ್ಲೂಕಿನ ಗ್ರಾಮಸ್ಥರು ಆಲೂರು ತಾಲ್ಲೂಕಿಗೆ ಹೆಚ್ಚುವರಿ ನೋಟರಿಗಳನ್ನು ನೇಮಿಸುವಂತೆ ಕೋರಿದ್ದರು. ಆ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸಲು ಮೇಲೆ (2)ರಲ್ಲಿ ಓದಲಾದ ದಿನಾಂಕ : 30–06–2011ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಹಾಗೂ ಜಿಲ್ಲಾಧಿಕಾರಿ, ಹಾಸನ ಇವರುಗಳನ್ನು ಕೋರಲಾಗಿತ್ತು.

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಹಾಗೂ ಜಿಲ್ಲಾಧಿಕಾರಿಗಳು, ಹಾಸನ ಇವರು ಮೇಲೆ (3) ಮತ್ತು (4)ರಲ್ಲಿ ಓದಲಾದ ದಿನಾಂಕ : 30–08–2011ರ ಮತ್ತು 24–09–2011ರ ಪತ್ರಗಳಲ್ಲಿ ಆಲೂರು ಕಂದಾಯ ತಾಲ್ಲೂಕಿಗೆ ಪ್ರಸ್ತುತ ಒಬ್ಬ ನೋಟರಿ ಮಾತ್ರ ಇದ್ದು, 2010ನೇ ಸಾಲಿನಲ್ಲಿ ಅವರ ಕೆಲಸದ ವಿವರದ ಮಾಹಿತಿ ನೀಡಿ, ಅವರು ಆಲೂರಿನಲ್ಲಿ ವಕೀಲ ವೃತ್ತಿ ನಡೆಸುತ್ತಿದ್ದು, ನಿಯಮಾನುಸಾರ ಕೇಂದ್ರಸ್ಥಾನದಲ್ಲಿ ಅವರದೇ ಆದ ಕಛೇರಿಯನ್ನು ಹೊಂದಿರುತ್ತಾರೆ ಮತ್ತು ಸಾರ್ವಜನಿಕರಿಗೆ ಲಭ್ಯವಿರುತ್ತಾರೆ. ಆದರೆ ಆಲೂರು ಕಂದಾಯ ತಾಲ್ಲೂಕಿಗೆ ಕೇಂದ್ರ ಸರ್ಕಾರದ ವತಿಯಿಂದ ಯಾವುದೇ ನೋಟರಿ ನೇಮಕಗೊಂಡಿಲ್ಲ. 2011ರ ಜನಗಣತಿಯಂತೆ ಆಲೂರು ಪಟ್ಟಣದಲ್ಲಿ ಶೇಕಡ 10 ರಿಂದ 12ರಷ್ಟು ಜನಸಂಖ್ಯೆ ಹೆಚ್ಚಾಗಿದ್ದು ಸರ್ಕಾರದಿಂದ ಸವಲತ್ತುಗಳನ್ನು ಹೊಂದಲು ಹಾಗೂ ಇನ್ನಿತರ ಕೆಲಸಗಳಿಗಾಗಿ ಸಾರ್ವಜನಿಕರು ನೋಟರಿಗಳ ಸೇವೆಯನ್ನು ಪಡೆಯಬೇಕಾಗಿರುವುದರಿಂದ ಹಾಲಿ ಇರುವ ನೋಟರಿಗೆ ಹೆಚ್ಚಿನ ಕೆಲಸದ ಒತ್ತಡವಿರುತ್ತದೆ. ಸಾರ್ವಜನಿಕರ ಹಿತದೃಷ್ಟಿಯಿಂದ ಆಲೂರು ತಾಲ್ಲೂಕಿಗೆ ಹೆಚ್ಚುವರಿ ನೋಟರಿ ಹುದ್ದೆಗಳನ್ನು ಸೃಜಿಸುವ ಅಗತ್ಯ ಕಂಡುಬರುತ್ತದೆ ಎಂಬ ಅಭಿಪ್ರಾಯ ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲಾ 180 ಎಲ್‌ಸಿಎಲ್ 2011, ಬೆಂಗಳೂರು, ದಿನಾಂಕ : 11–11–2011**

ಹಾಸನ ಜಿಲ್ಲೆಯ ಆಲೂರು ಕಂದಾಯ ತಾಲ್ಲೂಕಿಗೆ ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ 2 ನೋಟರಿ ಹುದ್ದೆಗಳನ್ನು ಸೃಜಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಆರ್. ಶಕುಂತಲ**
ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ–2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. 2685

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಚಾಮರಾಜನಗರ ಜಿಲ್ಲೆಯ ಯಳಂದೂರು ಕಂದಾಯ ತಾಲ್ಲೂಕಿನಲ್ಲಿನ ನೋಟರಿ ಹುದ್ದೆ ಭರ್ತಿ ಮಾಡುವ ಬಗ್ಗೆ. (ಶ್ರೀ ವೈ.ವಿ. ಗೋಪಾಲಕೃಷ್ಣ ಇವರ ರಾಜೀನಾಮೆಯಿಂದ ತೆರವು)

**ಓದಲಾಗಿದೆ :**

1. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ ಇವರ ಪತ್ರ ಸಂಖ್ಯೆ : ಆಡಳಿತ/2286/2010 ದಿನಾಂಕ : 12–08–2010 ಮತ್ತು 910/2011 ದಿನಾಂಕ : 20–04–2011.
2. ಸರ್ಕಾರದ ಆದೇಶ ಸಂಖ್ಯೆ : ಲಾ 197 ಎಲ್‌ಸಿಎಲ್ 2010, ದಿನಾಂಕ : 25–06–2011,
3. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ : ಜಿಎಸ್‌ಆರ್ 114 (ಇ) ದಿನಾಂಕ : 24–02–2009.
4. ಅಧಿಸೂಚನೆ ಸಂಖ್ಯೆ : ಲಾ 61 ಎಲ್‌ಸಿಎಲ್ 2009 ದಿನಾಂಕ : 24–07–2010.
5. ಸಂದರ್ಶನ ಸೂಚನಾ ಪತ್ರ ಸಂಖ್ಯೆ : ಲಾ 197 ಎಲ್‌ಸಿಎಲ್ 2010 ದಿನಾಂಕ : 03–08–2011.

**ಪ್ರಸ್ತಾವನೆ :**

ಯಳಂದೂರು ಕಂದಾಯ ತಾಲ್ಲೂಕಿನಲ್ಲಿ ನೋಟರಿಯಾಗಿ ನೇಮಕಗೊಂಡಿದ್ದ ಶ್ರೀ ವೈ.ವಿ.ಗೋಪಾಲಕೃಷ್ಣರವರು 2008ನೇ ಸಾಲಿನಿಂದ ನೋಟರಿ ಕರ್ತವ್ಯದ ರಿಟರ್ನ್ಸ್‌ಗಳನ್ನು ಸಲ್ಲಿಸಿರಲಿಲ್ಲ. ಆ ಬಗ್ಗೆ ವಿವರಣೆ ಕೋರಲಾಗಿ ನೋಟರಿ ಕೆಲಸವನ್ನು ಯಳಂದೂರು ತಾಲ್ಲೂಕಿನಲ್ಲಿ ನಿರ್ವಹಿಸಲು ಸಾಧ್ಯವಾಗದೆ ಪ್ರಮಾಣ ಪತ್ರವನ್ನು ನವೀಕರಿಸಿಕೊಂಡಿರುವುದಿಲ್ಲ. ಆದ್ದರಿಂದ ಆ ಕೆಲಸಕ್ಕೆ ರಾಜೀನಾಮೆ ಸಲ್ಲಿಸಿರುವುದಾಗಿ ದಿನಾಂಕ : 17–06–2010ರಂದು ಮನವಿ ಸಲ್ಲಿಸಿದ್ದರು. ಅದನ್ನು ಜಿಲ್ಲಾ ಸತ್ರ ನ್ಯಾಯಾಧೀಶರು, ಚಾಮರಾಜನಗರರವರು ದಿನಾಂಕ : 12–08–2010ರ ಪ್ರಸ್ತಾವನೆಯೊಂದಿಗೆ ನೋಟರಿ ರಾಜೀನಾಮೆಯನ್ನು ಅಂಗೀಕರಿಸಿ ಅವರ ಬದಲಿಗೆ ನೇಮಕಾತಿಗೊಳಿಸುವಂತೆ ಕೋರಿದ್ದರು. ನೋಟರಿ ನಿಯಮಾನುಸಾರ ರಾಜಿನಾಮೆ ಅಂಗೀಕರಿಸಿದ ನಂತರ ಬದಲಿ ನೇಮಕಾತಿ ಪ್ರಕ್ರಿಯೆ ಕೈಗೊಳ್ಳಬೇಕಾದ ಕಾರಣ ಶ್ರೀ ವೈ.ವಿ.ಗೋಪಾಲಕೃಷ್ಣ, ನೋಟರಿರವರ ರಾಜೀನಾಮೆಯನ್ನು ಉಲ್ಲೇಖಿತ (2)ರ ದಿನಾಂಕ : 25–06–2011 ರಂದು ದಿನಾಂಕ : 17–06–2010 ರಿಂದ ಪೂರ್ವಾನ್ವಯವಾಗುವಂತೆ ಅಂಗೀಕರಿಸಿದೆ ಮತ್ತು ಜಿಲ್ಲಾ ಸತ್ರ ನ್ಯಾಯಾಧೀಶರು ಉಲ್ಲೇಖಿತ (1)ರ ದಿನಾಂಕ : 12–08–2010 ಮತ್ತು 20–04–2011 ರಂದು 4 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಗಳನ್ನು ಸಲ್ಲಿಸಿದ್ದರು. ಅದರಂತೆ ಮೇಲೆ (3)ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು, 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ (5)ರಲ್ಲಿ ಓದಲಾದ ದಿನಾಂಕ : 03–08–2011ರ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ಆಯ್ಕೆ ಪಟ್ಟಿಯನ್ನು ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 197 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ : 11–11–2011**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಶ್ರೀ ಎಂ.ಮಾದೇಶ, ವಕೀಲರು S/o ಮಹದೇವಶೆಟ್ಟಿ, ಕೆಸ್ತೂರು, ಹೊಸಉಪ್ಪಾರ ಬೀದಿ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ ರವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಯಳಂದೂರು ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ –501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ. 1000.00 (ಒಂದು ಸಾವಿರ ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಆರ್. ಶಕುಂತಲ**
ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ–2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. 2686

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಗುಂಡ್ಲುಪೇಟೆ ಕಂದಾಯ ತಾಲ್ಲೂಕಿನಲ್ಲಿ ಖಾಲಿ ಇರುವ ನೋಟರಿ ಹುದ್ದೆಯನ್ನು ಭರ್ತಿ ಮಾಡುವ ಬಗ್ಗೆ (ಶ್ರೀ ವೃಷಭೇಂದ್ರ ಪ್ರಸಾದ್, ನೋಟರಿ, ಗುಂಡ್ಲುಪೇಟೆ ಇವರಿಂದ ತೆರವಾದ ಪ್ರಯುಕ್ತ)

**ಓದಲಾಗಿದೆ :**

1. ಸರ್ಕಾರದ ಪತ್ರ ಸಂಖ್ಯೆ : ಲಾ 46 ಎಲ್‌ಸಿಎಲ್ 2009, ದಿನಾಂಕ : 04–06–2009, ಹಾಗೂ ಇದೇ ಕ್ರಮಾಂಕದ ಅರೆ ಸರ್ಕಾರಿ ಪತ್ರ ದಿನಾಂಕ : 02–03–2010.
2. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ ಇವರ ಪತ್ರ ಸಂಖ್ಯೆ : ಆಡಳಿತ/883/2010 ದಿನಾಂಕ : 17–03–2010.
3. ಸರ್ಕಾರದ ಪತ್ರ ಸಂಖ್ಯೆ : ಲಾ 46 ಎಲ್‌ಸಿಎಲ್ 2009, ದಿನಾಂಕ : 16–04–2010..

4. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ ಇವರ ಪತ್ರ ಸಂಖ್ಯೆ : ಆಡಳಿತ/2285/2010 ದಿನಾಂಕ : 12-08-2010.
5. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ : ಜಿಎಸ್‌ಆರ್ 114 (ಇ) ದಿನಾಂಕ : 24-02-2009.
6. ಅಧಿಸೂಚನೆ ಸಂಖ್ಯೆ : ಲಾ 61 ಎಲ್‌ಸಿಎಲ್ 2009 ದಿನಾಂಕ : 24-07-2010.
7. ಸಂದರ್ಶನ ಸೂಚನಾ ಪತ್ರ ಸಂಖ್ಯೆ : ಲಾ 46 ಎಲ್‌ಸಿಎಲ್ 2009 ದಿನಾಂಕ : 03-08-2011.

**ಪ್ರಸ್ತಾವನೆ :**

ಗುಂಡ್ಲುಪೇಟೆ ಕಂದಾಯ ತಾಲ್ಲೂಕಿನಲ್ಲಿ ನೋಟರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ವೃಷಭೇಂದ್ರ ಪ್ರಸಾದ್ ಇವರಿಂದ ತೆರವಾದ ನೋಟರಿ ಹುದ್ದೆ ಭರ್ತಿ ಮಾಡುವ ಅವಶ್ಯಕತೆ ಬಗ್ಗೆ ಮೇಲೆ (1)ರಲ್ಲಿ ಓದಲಾದ ಪತ್ರಗಳಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರ ಅಭಿಪ್ರಾಯ ಕೋರಲಾಗಿದ್ದರ ಮೇರೆಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ : 17-03-2010ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ ಇವರು ಶ್ರೀ ವೃಷಭೇಂದ್ರ ಪ್ರಸಾದ್ ಇವರಿಂದ ತೆರವಾಗಿರುವ ನೋಟರಿ ಜಾಗ ಭರ್ತಿ ಮಾಡುವ ಅವಶ್ಯಕತೆ ಇದೆ ಎಂದು ವರದಿ ಮಾಡಿರುತ್ತಾರೆ. ಆ ಮೇರೆಗೆ ಖಾಲಿ ನೋಟರಿ ಜಾಗ ಭರ್ತಿ ಮಡಲು ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳಡಿಯಲ್ಲಿ ಪರಿಶೀಲಿಸಿ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ ಇವರನ್ನು ಮೇಲೆ (3)ರಲ್ಲಿ ಓದಲಾದ ದಿನಾಂಕ : 16-04-2010ರ ಪತ್ರದಲ್ಲಿ ಕೋರಲಾಗಿತ್ತು. ಅದರಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ ಇವರು ಮೇಲೆ (4)ರಲ್ಲಿ ಓದಲಾದ ದಿನಾಂಕ : 12-08-2010ರ ಪತ್ರದೊಂದಿಗೆ 3 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆ ಸಲ್ಲಿಸಿದ್ದು, ಆ ಪ್ರಸ್ತಾವನೆಯನ್ನು ಮೇಲೆ (5)ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ (6)ರಲ್ಲಿ ಓದಲಾದ ದಿನಾಂಕ : 24-07-2010ರ ಅಧಿಸೂಚನೆಯಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ (7)ರಲ್ಲಿ ಓದಲಾದ ದಿನಾಂಕ : 03-08-2011ರ ಸೂಚನಾ ಪತ್ರದಲ್ಲಿ ಸೂಚಿಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ಆಯ್ಕೆ ಪಟ್ಟಿಯನ್ನು ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 46 ಎಲ್‌ಸಿಎಲ್ 2009, ಬೆಂಗಳೂರು, ದಿನಾಂಕ : 09-11-2011**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದಂತೆ ಶ್ರೀ ಆರ್. ಗಂಗಾಧರ್, ವಕೀಲರು S/o ಎ. ರಾಮಸ್ವಾಮಿ, ನಂ. 2, 1ನೇ ವಿಭಾಗ, 2ನೇ ವಾರ್ಡ್, ಬೆಂಗಳೂರು-ನೀಲಗಿರಿ ರೋಡ್, ಗುಂಡ್ಲುಪೇಟೆ, ಚಾಮರಾಜನಗರ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಗುಂಡ್ಲುಪೇಟೆ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ -501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ. 1000.00 (ಒಂದು ಸಾವಿರ ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ-2)

ಪಿ.ಆರ್. 2687 ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ಕಂದಾಯ ತಾಲ್ಲೂಕಿನಲ್ಲಿನ ನೋಟರಿ ಹುದ್ದೆ ಭರ್ತಿ ಮಾಡುವ ಬಗ್ಗೆ (ಶ್ರೀ ಎಂ.ಪ್ರಕಾಶ್‌ರವರ ನಿಧನದ ಪ್ರಯುಕ್ತ)

**ಓದಲಾಗಿದೆ :**

1. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಇವರ ಪತ್ರ ಸಂಖ್ಯೆ : ಡಿಜೆ/ಡಿವಿಜಿ/4820/2011 ದಿನಾಂಕ : 27-04-2011.
2. ಸರ್ಕಾರದ ಪತ್ರ ಸಂಖ್ಯೆ : ಲಾ 241 ಎಲ್‌ಸಿಎಲ್ 2010, ದಿನಾಂಕ : 25-05-2011.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಇವರ ಪತ್ರ ಸಂಖ್ಯೆ : ಡಿಜೆ/ಡಿವಿಜಿ/6225/2010, ದಿನಾಂಕ : 29-06-2011.
4. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ : ಜಿಎಸ್‌ಆರ್ 114 (ಇ) ದಿನಾಂಕ : 24-02-2009.
5. ಅಧಿಸೂಚನೆ ಸಂಖ್ಯೆ : ಲಾ 61 ಎಲ್‌ಸಿಎಲ್ 2009 ದಿನಾಂಕ : 24-07-2010.
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ : ಲಾ 241 ಎಲ್‌ಸಿಎಲ್ 2010 ದಿನಾಂಕ : 29-08-2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 27-04-2011ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಇವರು ಶ್ರೀ ಎಂ. ಪ್ರಕಾಶ್, ನೋಟರಿ, ಹರಪನಹಳ್ಳಿ, ಇವರು ದಿನಾಂಕ : 20-11-2009ರಂದು ನಿಧನರಾಗಿರುವುದಾಗಿ ದೃಢೀಕೃತ ಮರಣ ಪ್ರಮಾಣ ಪತ್ರವನ್ನು ಕಳುಹಿಸಿದ್ದರು. ಆ ಮೇರೆಗೆ ಶ್ರೀಯುತರ ನಿಧನದಿಂದ ತೆರವಾದ ನೋಟರಿ ಹುದ್ದೆಯನ್ನು ಭರ್ತಿಮಾಡಲು ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳಡಿಯಲ್ಲಿ ಪರಿಶೀಲಿಸಿ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ದಾವಣಗೆರೆ ಇವರನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ : 25-05-2011ರ ಪತ್ರದಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ : 29-06-2011ರ ಪತ್ರದೊಂದಿಗೆ 17 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆ ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ (4)ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ (5)ರಲ್ಲಿ ಓದಲಾದ ದಿನಾಂಕ : 24-07-2010ರ ಅಧಿಸೂಚನೆಯಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ (6)ರಲ್ಲಿ ಓದಲಾದ ದಿನಾಂಕ : 29-08-2011ರ ಸೂಚನಾ ಪತ್ರದಲ್ಲಿ ಸೂಚಿಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ಆಯ್ಕೆ ಪಟ್ಟಿಯನ್ನು ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿ ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲಾ 241 ಎಲ್‌ಸಿಎಲ್ 2010, ಬೆಂಗಳೂರು, ದಿನಾಂಕ : 08-11-2011**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದಂತೆ ಶ್ರೀ ಸರ್ ದೇಸಾಯಿ ಗೋಪಿನಾಥ್, ವಕೀಲರು, S/o ಎಸ್. ನಾರಾಯಣಮೂರ್ತಿ, ಅರಸೀಕೆರೆ, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಹರಪನಹಳ್ಳಿ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ -501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ. 1000.00 (ಒಂದು ಸಾವಿರ ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ-2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. 2688

## ಸಹಕಾರ ಸಚಿವಾಲಯ

**ವಿಷಯ :** ವಿಫಲಬಾವಿ ಪರಿಹಾರ ಯೋಜನೆಯಡಿ ಅಸಲು ಪರಿಹಾರಧನ ಮತ್ತು ಬಡ್ಡಿ ಬಾಬ್ತು ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಒ 275 ಸಿಎಲ್‌ಎಸ್ 2010, ದಿನಾಂಕ : 18-02-2011.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಆರ್‌ಸಿಎಸ್/ಎಲ್‌ಡಿಬಿ2/ಎಫ್-42/ಎಲ್‌ಎಂಸಿ/2010-11 ದಿನಾಂಕ : 19-08-2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ವಿಫಲಬಾವಿ ಪರಿಹಾರಧನ ಯೋಜನೆಯಡಿ ಸಹಕಾರ ಸಂಘಗಳ ನಿಬಂಧಕರ ಕಛೇರಿಯಲ್ಲಿ ಅಸಲು ಪರಿಹಾರ ಧನ ಮತ್ತು ಶೇ. 50ರ ಬಡ್ಡಿ ಬಾಬ್ತು ಬಿಡುಗಡೆಗೆ ಬಾಕಿ ಇರುವ ಮೊತ್ತ ರೂ. 657.43 ಲಕ್ಷಗಳನ್ನು 2010-11ನೇ ಸಾಲಿನ ಪೂರಕ ಅಂದಾಜು ಎರಡನೇ ಕಂತಿನಲ್ಲಿ ಕೆಲವು ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲಾಗಿದೆ.

2011-12ನೇ ಸಾಲಿನ ಆಯವ್ಯಯದಲ್ಲಿ ಈ ಯೋಜನೆಗೆ ಹಂಚಿಕೆ ಮಾಡಿರುವ ರೂ. 1.00 ಕೋಟಿಯನ್ನು ಬಿಡುಗಡೆ ಮಾಡಲು ಮತ್ತು ರೂ. 7.99 ಕೋಟಿ ಹೆಚ್ಚುವರಿ ಹಣದ ಅವಕಾಶ ಕಲ್ಪಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಕೋರಿರುತ್ತಾರೆ. ಸಹಕಾರ ಸಂಘಗಳ ನಿಬಂಧಕರ ಕಛೇರಿಯಲ್ಲಿ ಬಾಕಿ ಇರುವ ಪ್ರಕರಣಗಳಿಗೆ ವಿಫಲಬಾವಿ ಅಸಲು ಪರಿಹಾರಧನ ರೂ. 1.00 ಕೋಟಿಯನ್ನು ಬಿಡುಗಡೆ ಮಾಡಲು ತೀರ್ಮಾನಿಸಲಾಗಿರುತ್ತದೆ.

ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 275 ಸಿಎಲ್‌ಎಸ್ 2010, ಬೆಂಗಳೂರು, ದಿನಾಂಕ : 08-11-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಫಲಬಾವಿ ಪರಿಹಾರಧನ ಯೋಜನೆಯಡಿ ಸಹಕಾರ ಸಂಘಗಳ ನಿಬಂಧಕರ ಕಛೇರಿಯಲ್ಲಿ ಬಾಕಿ ಇರುವ ಪ್ರಕರಣಗಳಿಗೆ ಸಂಬಂಧಿಸಿದಂತೆ ಅಸಲು ಪರಿಹಾರಧನ ಮತ್ತು ಶೇ. 50ರ ಬಡ್ಡಿ ಬಾಬ್ತು 2011-12ನೇ ಸಾಲಿನ ಆಯವ್ಯಯದಲ್ಲಿ ವಿಫಲಬಾವಿ ಪರಿಹಾರಧನ ಯೋಜನೆಗೆ ಹಂಚಿಕೆ ಮಾಡಿರುವ ರೂ. 1.00 ಕೋಟಿಯನ್ನು ಲೆಕ್ಕಶೀರ್ಷಿಕೆ "2425-00-107-3-01-101-ಸಹಾಯಾನುದಾನ (ಯೋಜನೇತರ)" ಅಡಿ ಬಿಡುಗಡೆ ಮಾಡಲಾಗಿದೆ.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿಯ ಮೂಲಕ ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ಇವರು ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ/418/ವೆಚ್ಚ-2/2011, ದಿನಾಂಕ : 31-10-2011ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

ಪಿ.ಆರ್. 2689

## ತೋಟಗಾರಿಕೆ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯಕ್ಕೆ ಧಾರವಾಡದ ರಾಯಪುರದಲ್ಲಿರುವ ರೇಷ್ಮೆ ಇಲಾಖೆಯ ಖಾಲಿ ಇರುವ ಕಟ್ಟಡಗಳನ್ನು ತಾತ್ಕಾಲಿಕವಾಗಿ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ : ಲಾ 120 ಕೆಎಲ್‌ಎಂ 2009, ದಿನಾಂಕ : 13-12-2010.
2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ : ರೇಬಿರೇಕ್ಷೇ/ಕಟ್ಟಡ/ಕಾವಿವಿದ್ಯಾ/20/2009-10, ದಿನಾಂಕ : 02-09-2011.
3. ಸರ್ಕಾರದ ಆದೇಶ ಸಂಖ್ಯೆ : ವಾಕೈ 10 ರೇಯೋವಿ 2010, ದಿನಾಂಕ : 22-05-2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರು ಈಗಾಗಲೇ ಮೇಲೆ ಓದಲಾದ ಕ್ರಮಸಂಖ್ಯೆ (3)ರ ಆದೇಶದಲ್ಲಿ ರೇಷ್ಮೆ ಇಲಾಖೆಯಿಂದ ಹಸ್ತಾಂತರಗೊಂಡ ಬಿತ್ತನೆಕೋಠಿಯ ಮೊದಲನೇ ಮಹಡಿಯ ಕೆಳಗೆ ಇರುವ ನೆಲಮಹಡಿಯನ್ನು ಸಹ ಕಾನೂನು ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸುವ ಬಗ್ಗೆ ಸರ್ಕಾರದ ಆದೇಶ ಹೊರಡಿಸುವಂತೆ ಸದರಿ ವಿಶ್ವವಿದ್ಯಾಲಯದ ಕುಲಸಚಿವರು ಕೋರಿರುವ ಬಗ್ಗೆ ತಿಳಿಸಿ, ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯವು ಮಹತ್ವದ ಯೋಜನೆಯಾಗಿದ್ದು, ಸದರಿ ವಿಶ್ವವಿದ್ಯಾಲಯದ ಆವರಣದಲ್ಲಿ ಸುಸಜ್ಜಿತ ಹಾಗೂ ಉನ್ನತ ಮಟ್ಟದ ಕಾನೂನು ಶಾಲೆಯನ್ನು ನಡೆಸಲು ರಾಜ್ಯ ಸರ್ಕಾರವು ಬದ್ಧವಾಗಿರುವುದರಿಂದ ಕುಲಸಚಿವರ ಕೋರಿಕೆಯಂತೆ ಧಾರವಾಡದ ರಾಯಪುರದಲ್ಲಿರುವ ರೇಷ್ಮೆ ಇಲಾಖೆಯ ಖಾಲಿ ಇರುವ ಕಟ್ಟಡಗಳನ್ನು ಹಾಗೂ ಬಿತ್ತನೆಕೋಠಿಯ ಮೊದಲನೆ ಮಹಡಿಯ ಕೆಳಗೆ ಇರುವ ನೆಲಮಹಡಿಯನ್ನು ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯಕ್ಕೆ ತಾತ್ಕಾಲಿಕವಾಗಿ ಹಸ್ತಾಂತರಿಸುವ ಬಗ್ಗೆ ಸೂಕ್ತ ಸರ್ಕಾರಿ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಸರ್ಕಾರಿ ಬಿತ್ತನೆ ಕೋಠಿ, ರಾಯಪುರದ ಕಟ್ಟಡ ಪರಿಶೀಲನೆಯ ಸಂದರ್ಭದಲ್ಲಿ ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯದ ಕುಲಸಚಿವರು ಭೇಟಿಯಾಗಿ ಸದರಿ ಕಟ್ಟಡದ ನೆಲಮಹಡಿಯನ್ನೂ ಕೂಡ ಕಾನೂನು ವಿಶ್ವವಿದ್ಯಾಲಯದ ಉಪಯೋಗಕ್ಕೆ ಒದಗಿಸಿಕೊಡುವಂತೆ ಕೋರಿದ್ದರ ಹಿನ್ನೆಲೆಯಲ್ಲಿ ರೇಷ್ಮೆ ಜಂಟಿ ನಿರ್ದೇಶಕರು, ಬೆಳಗಾವಿ ಹಾಗೂ ಸ್ಥಳೀಯ ಅಧಿಕಾರಿಗಳೊಂದಿಗೆ ಚರ್ಚಿಸಿ, ಈ ಕೆಳಕಂಡ ಷರತ್ತುಗಳನ್ನು ಪಾಲಿಸಲು ಬದ್ಧವಾಗಿದೆ ಎಂದು ಒಪ್ಪಿಕೊಂಡು ಸ್ಥಾನಿಕ ಅಭಿಯಂತರರು, ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ, ಹುಬ್ಬಳ್ಳಿ ಇವರು ಮುಚ್ಚಳಿಕೆ ಪತ್ರ ನೀಡಿರುವುದರಿಂದ ರೇಷ್ಮೆ ಇಲಾಖೆಯಿಂದ ಹಸ್ತಾಂತರಗೊಂಡಿರುವ ಬಿತ್ತನೆ ಕೋಠಿ ಕಟ್ಟಡದ ಮೊದಲನೆ ಮಹಡಿಯ ಕೆಳಗಿರುವ ನೆಲಮಹಡಿಯನ್ನು ಕಾನೂನು ವಿಶ್ವವಿದ್ಯಾಲಯಕ್ಕೆ ನೀಡಲು ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

1. ಈಗಾಗಲೇ ಕಾನೂನು ವಿಶ್ವವಿದ್ಯಾಲಯಕ್ಕೆ ಹಸ್ತಾಂತರಗೊಳಿಸಿದ ಮೌಂಟಿಂಗ್ ಹಾಲ್ ಮತ್ತು ವಸತಿ ಗೃಹಗಳನ್ನು ವಿಶ್ವವಿದ್ಯಾಲಯವು ತನ್ನ ಖರ್ಚಿನಲ್ಲಿಯೇ ಅಗತ್ಯಕ್ಕೆ ತಕ್ಕಂತೆ ಕೂಡಲೇ ದುರಸ್ಥಿಗೊಳಿಸಿ ಇಲಾಖೆಗೆ ಹಿಂದಿರುಗಿಸುವುದು.
2. ಹಾಲಿ ಬಿಟ್ಟುಕೊಡಲು ಉದ್ದೇಶಿಸಿರುವ ಬಿತ್ತನೆಕೋಠಿ ಕಟ್ಟಡದ ನೆಲಮಹಡಿಯ ಎಡಭಾಗದ ಹಜಾರವನ್ನು ತೆರವುಗೊಳಿಸಲು ವಿಶ್ವವಿದ್ಯಾಲಯವು ಅನುಕೂಲ ಕಲ್ಪಿಸಬೇಕು.
3. ಬಿತ್ತನೆಕೋಠಿ ಕಟ್ಟಡದ ಸುತ್ತಲೂ ಉತ್ತಮ ಉದ್ಯಾನ ನಿರ್ಮಿಸಿ ಸ್ವಚ್ಛತೆಯನ್ನು ಕಾಪಾಡಿಕೊಳ್ಳಬೇಕು.

ಮೇಲ್ಕಂಡ ಷರತ್ತುಗಳನ್ನು ಒಪ್ಪಿಕೊಂಡು ಸ್ಥಾನಿಕ ಅಭಿಯಂತರರು, ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ, ಹುಬ್ಬಳ್ಳಿ ಇವರು ಮುಚ್ಚಳಿಕೆ ಪತ್ರ ನೀಡಿರುವುದರಿಂದ ಹಾಗೂ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಕೋರಿರುವಂತೆ ಬಿತ್ತನೆಕೋಠಿ ಕಟ್ಟಡದ ಮೊದಲನೆ ಮಹಡಿಯ ಕೆಳಗಿರುವ ನೆಲಮಹಡಿಯನ್ನು ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯಕ್ಕೆ ನೀಡಲು ತೀರ್ಮಾನಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ತೋಇ 18 ರೇಯೋವಿ 2011, ಬೆಂಗಳೂರು, ದಿನಾಂಕ : 28-10-2011**

ಧಾರವಾಡದ ರಾಯಪುರದಲ್ಲಿರುವ ಈಗಾಗಲೇ ಹಸ್ತಾಂತರಗೊಂಡಿರುವ ರೇಷ್ಮೆ ಇಲಾಖೆಯ ಬಿತ್ತನೆಕೋಠಿ ಕಟ್ಟಡದ ಮೊದಲನೆ ಮಹಡಿಯ ಕೆಳಗಿರುವ ನೆಲಮಹಡಿಯನ್ನು ಮೇಲ್ಕಂಡ ಷರತ್ತುಗಳಿಗೊಳಪಟ್ಟು ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯಕ್ಕೆ ತಾತ್ಕಾಲಿಕವಾಗಿ ನೀಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಎಸ್. ಚಂದ್ರಶೇಖರ್**
ಪೀಠಾಧಿಕಾರಿ
ತೋಟಗಾರಿಕೆ ಇಲಾಖೆ (ರೇಷ್ಮೆ)

ಪಿ.ಆರ್. 2690

## PLANNING, PROGRAMME MONITORING AND STATISTICS SECRETARIAT

**Sub:** Utilization of Contingency funds of MPLAD Scheme by the State Nodal Department.

***Read:*** Letter No. C-42/2011-MPLADS, dtd : 08-08-2011 of Additional Secretary, Ministry of Statistics and Programme Implementation, Government of India, New Delhi.

**PREAMBLE:**

During 2011-12, Ministry of Statistics and Progamme Implementation, Government of India, New Delhi has modified MPLADS guidelines and increased the entitlements of MPLAD Scheme funds from Rs. 2.00 to Rs. 5.00 Crores. Consequently the contingency fund has also been increased from 0.5% to 2% of the entitlement. Heither to the Deputy Commissioners were allowed to utilize the contingency fund at the district level only. From the current year the State Nodal Department is also permitted to utilize 0.2% of the entitlement of the funds of Loka Sabha and Rajya Sabha MPs (excluding the funds of Rajya Sabha nominated members) for the State level expenses like third party inspection/physical audit and quality checks and monitoring of works at State level.

The MPLADS funds are not released to the State Nodal Department and released directly to Deputy Commissioners by Government of India, Deputy Commissioner in turn have been instructed to release 0.20% of the entitlement to the State Nodal Department viz., Planning, Programme Monitoring and Statistics Department for incurring contingency expenditure. Therefore, it is essential that on SB Account be opened in any of the Nationalised Banks by the State Nodal Departments. Finance Department was requested to permit the Planning, Programme Monitoring and Statistics Department to open a Bank Account and it has concurred for opening a Bank account of Director, ADB Division, Planning, Programme Monitoring and Statistics Department, Govt. of Karnataka, Bangalore. Hence the Order.

**GOVERNMENT ORDER NO. PD 28 YOGASE 2011, BANGALORE, DATED: 15-10-2011.**

As explained in the preamble above to facilitate Deputy Commissioners of the concerned districts for remitting 0.2% of the Contingency fund of MPLADS Scheme (i.e. Rs. 1.00 for Lok Sabha/Rajya Sabha MPs) an SB Account of the Director, ADB Division, Planning, Programme Monitoring and Statistics Department has been opened in State Bank of Mysore, M.S. Building Branch, Ambedkar Veedhi, Bangalore. The SB Account No. is 64085305565, Branch Code 40526.

This order is issued with the concurrence of Finance Department vide endorsement No. FD 713 ಆನಿ2011, dtd : 04-10-2011.

By Order and in the name of the Governor of Karnataka

**B. CHIKKARAJU**

Under Secretary to Government

Planning, Programme Monitoring and Statistics Department.

PR No. 2612

## ENERGY SECRETARIAT

**Sub:** Change of Company's name from M/s Chincholi Sugar Mills Limited to M/s Chincholi Sugar & Bio Industries Limited-reg.

**Read:**
1. Government Letter No. DE 265 NCE 2002 dated : 13-11-2002.
2. Letter No. KRED/04/CS-BIL/2010/2950 dated : 22/23-09-2011 received from the Managing Director, Karnataka Renewable Energy Development Limited, Bangalore.

**PREAMBLE:**

In the Government Letter read at (1) above, "No Objection" have been issued for setting up of 26 MW (gross) 17 MW (Exportable during season and 23 MW during off season) bagasse based Co-generation power plant at Chincholi village, Gulbarga District by M/s Chincholi Sugar Mills Limited.

The Registrar companies, Karnataka vide CIN No : U85110AA1995PLC018746 dated : 06-04-2006 had changed the name of the company from M/s Chincholi Sugar Mills Limited to M/s Chincholi Sugar & Bio Industries Limited.

The Managing Director, Karnataka Renewable Energy Development Limited, Bangalore in his letter read at (2) above has recommended for change of company name from M/s Chincholi Sugar Mills Limited to M/s Chincholi Sugar & Bio Industries Limited.

The proposal has been examined in detail and hence the following Order :-

**GOVERNMENT ORDER NO. EN 373 NCE 2011, BANGALORE, DATED: 17-10-2011.**

Government accords approval for the change of company name from M/s Chincholi Sugar Mills Limited to M/s Chincholi Sugar & Bio Industries Limited.

The Government reserves the right to Cancel/Modify this Order.

By Order and in the name of the Governor of Karnataka

**SURESH B. KRISHNAPPANAVAR**

Under Secretary to Government

Energy Department.

PR No. 2613

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ರೂ. 533.00 ಲಕ್ಷಗಳ ವೆಚ್ಚದಲ್ಲಿ ಕರ್ನಾಟಕ ಬಾಲವಿಕಾಸ ಅಕಾಡೆಮಿಯ ಸ್ವಂತ ಕಟ್ಟಡದ ನಿರ್ಮಾಣ ಮಾಡಲು ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :**
1. ಆದೇಶ ಸಂಖ್ಯೆ : ಮಮಇ 215 ಮಭಾಬ 2008, ದಿನಾಂಕ : 30–10–2008.
2. ಯೋಜನಾಧಿಕಾರಿಗಳು, ಕರ್ನಾಟಕ ಬಾಲವಿಕಾಸ ಅಕಾಡೆಮಿ ಇವರ ಪತ್ರ ಸಂ : ಕ.ಬಾ.ವಿ.ಅಧಾ./ಕಟ್ಟಡ ಅನುದಾನ/ಸಿ–1/2010–11/941, ದಿನಾಂಕ : 06–05–2010.
3. ಆದೇಶ ಸಂಖ್ಯೆ : ಮಮಇ 99 ಮಭಾಬ 2011, ದಿನಾಂಕ : 12–07–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಶಿಕ್ಷಣ, ಸಾಹಿತ್ಯ, ಕ್ರೀಡೆ, ಕಲೆ, ಸಾಂಸ್ಕೃತಿಕ ಹಾಗೂ ಮುಂತಾದ ಕ್ಷೇತ್ರಗಳಲ್ಲಿ ಮಕ್ಕಳ ಪ್ರತಿಭೆಗಳನ್ನು ಗುರುತಿಸುವ ಮತ್ತು ಅಂತಹ ಪ್ರತಿಭೆಯನ್ನು ಸಮಾಜಕ್ಕೆ ಪರಿಚಯಿಸಿ/ಬಿಂಬಿಸಲು ಹಾಗೂ ಮಕ್ಕಳ ಆರೋಗ್ಯ, ರಕ್ಷಣೆ, ಪೋಷಣೆ ಮತ್ತು ಶಿಕ್ಷಣ ಕ್ಷೇತ್ರಗಳ ಬಗ್ಗೆ ಗಮನ ಹರಿಸಿ ನೂತನ ಆವಿಷ್ಕಾರಗಳು, ಸಂಶೋಧನೆಗಳು ಹಾಗೂ ವಿವಿಧ ತರಬೇತಿ ಕಾರ್ಯಕ್ರಮಗಳನ್ನು ರೂಪಿಸುವ ನಿಟ್ಟಿನಲ್ಲಿ ಮಕ್ಕಳಿಗಾಗಿ ಬಾಲವಿಕಾಸ ಅಕಾಡೆಮಿಯನ್ನು ಧಾರವಾಡದಲ್ಲಿ ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಪ್ರಸ್ತಾವನೆಯಲ್ಲಿ ಬಾಲವಿಕಾಸ ಅಕಾಡೆಮಿಯು ಕರ್ನಾಟಕ ಸಂಘಗಳ ನೊಂದಣಿ ಅಧಿನಿಯಮ 1960 ರಡಿಯಲ್ಲಿ ಸಂಖ್ಯೆ : ಡಿಆರ್‌ಜಡ್ : ಸಂನೋ : 544 : 2009–10 ರಡಿ ದಿನಾಂಕ : 10–03–2010 ರಂದು ನೊಂದಣಿಯಾಗಿರುತ್ತದೆ. ಬಾಲವಿಕಾಸ ಅಕಾಡೆಮಿಯ ಕಛೇರಿಯು ಧಾರವಾಡದಲ್ಲಿದ್ದು, ಅಕಾಡೆಮಿಯು ಸ್ವಂತ ಕಟ್ಟಡ ಹೊಂದುವುದು ತುಂಬಾ ಅವಶ್ಯಕವಾಗಿರುತ್ತದೆ. ಬಾಲಜ್ಞಾನ ವಿಕಾಸ ಸಮುಚ್ಚಯಕ್ಕಾಗಿ ಮತ್ತು ಮಕ್ಕಳ ಸರ್ವಾಂಗೀಣ ಅಭಿವೃದ್ಧಿಗೆ ಪೂರಕವಾಗಿ ಮಕ್ಕಳಿಗಾಗಿ ವಿಜ್ಞಾನ ಸಮುಚ್ಚಯ, ಕಲಾಭವನ, ಬಯಲು ಸಿನಿಮಾ ಥಿಯೇಟರ್, ಗ್ರಂಥಾಲಯ, ಆಟದ ಮೈದಾನ, ಈಜುಕೊಳ ಇತ್ಯಾದಿಗಳನ್ನು ಹೊಂದುವುದು ತುಂಬಾ ಅವಶ್ಯವಾಗಿರುತ್ತದೆ. ಆದ್ದರಿಂದ, ಅಕಾಡೆಮಿಯ ಜ್ಞಾನ ಸಮುಚ್ಚಯಕ್ಕಾಗಿ ರೂ. 533 ಲಕ್ಷಗಳ ವಿವರವಾದ ಅಂದಾಜು ಪಟ್ಟಿಯನ್ನು ಕಾರ್ಯನಿರ್ವಾಹಕ ಅಭಿಯಂತರರು, ಲೋಕೋಪಯೋಗಿ, ಧಾರವಾಡ ಇವರಿಂದ ಪಡೆಯಲಾಗಿದ್ದು, ಸದರಿ ವೆಚ್ಚವನ್ನು ಅಕಾಡೆಮಿಗೆ ಒದಗಿಸಿರುವ ಆಯವ್ಯಯದ ಅನುದಾನದಲ್ಲಿಯೇ ಭರಿಸಲಾಗುವುದು ಎಂದು ತಿಳಿಸುತ್ತಾ, ಸ್ವಂತ ಕಟ್ಟಡವನ್ನು ನಿರ್ಮಾಣ ಮಾಡಲು ಅನುಮೋದನೆ ನೀಡುವಂತೆ ಯೋಜನಾಧಿಕಾರಿಗಳು, ಬಾಲವಿಕಾಸ ಅಕಾಡೆಮಿ ಇವರು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (3)ರ ಆದೇಶದಲ್ಲಿ 2011–12ನೇ ಸಾಲಿನ ಕರ್ನಾಟಕ ಬಾಲವಿಕಾಸ ಅಕಾಡೆಮಿಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ರೂ. 400.00 ಲಕ್ಷಗಳ ಅಂದಾಜು ಆಯವ್ಯಯದ ಕ್ರಿಯಾ ಯೋಜನೆಗೆ ಷರತ್ತುಗಳೊಂದಿಗೆ ಅನುಮೋದನೆ ನೀಡಲಾಗಿದೆ.

**ಆದೇಶ ಸಂಖ್ಯೆ : ಮಮಇ 99 ಮಮಅ 2010, ಬೆಂಗಳೂರು, ದಿನಾಂಕ : 28–10–2011**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ರೂ. 533.00 ಲಕ್ಷಗಳ ವೆಚ್ಚದಲ್ಲಿ ಕರ್ನಾಟಕ ಬಾಲವಿಕಾಸ ಅಕಾಡೆಮಿ, ಧಾರವಾಡ ಇದಕ್ಕೆ ಸ್ವಂತ ಕಟ್ಟಡವನ್ನು ನಿರ್ಮಾಣ ಮಾಡಲು ಯೋಜನಾಧಿಕಾರಿಗಳು, ಕರ್ನಾಟಕ ಬಾಲವಿಕಾಸ ಅಕಾಡೆಮಿ ಇವರಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ವೆಚ್ಚವನ್ನು ಬಾಲವಿಕಾಸ ಅಕಾಡೆಮಿಗೆ ಒದಗಿಸುವ ವಾರ್ಷಿಕ ಆಯವ್ಯಯದಲ್ಲಿ 1/3 ಭಾಗವನ್ನು ಮೀಸಲಿರಿಸಿಕೊಂಡು ಭರಿಸತಕ್ಕದ್ದು ಹಾಗೂ ಕರ್ನಾಟಕ ಪಾರದರ್ಶಕತೆ ಮತ್ತು ಸಂಗ್ರಹಣೆ ಅಧಿನಿಯಮ 1999 ಮತ್ತು ನಿಯಮಗಳನ್ನು ಕಡ್ಡಾಯವಾಗಿ ಪಾಲಿಸಿ ನಿರ್ಮಾಣ ಕಾರ್ಯವನ್ನು ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಸಚಿವ ಸಂಪುಟದ ನಿರ್ಣಯ ದಿನಾಂಕ : 13–10–2011, ಪ್ರಕರಣ ಸಂಖ್ಯೆ : ಸಿ452/2011 ರನ್ವಯ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 294 ಇಎಕ್ಸ್‌ಪಿ 2011, ದಿನಾಂಕ : 10–05–2011ರ ಸಹಮತದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎನ್.ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ–1

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್. 2614

## FOREST, ECOLOGY & ENVIRONMENT SECRETARIAT

**Sub:** Constitution of District Level Coastal Zone Management Committees-reg.

**Read:**
1. Notification No. S.O. 19(E) dated 6th January 2011 issued by the Ministry of Environment and Forests, Government of India, New Delhi.
2. Letter No. CRZ 43 2011-12/CNO-49795/B7 dated 25-05-2011 of the office of the Deputy Commissioner, Dakshina Kannada District, Mangalore.
3. Letter No. UDC/CRZ/2011-12 dated 27-04-2011 of the office of the Deputy Commissioner , Udupi District, Udupi.
4. Letter No. UDC/CRZ/2011-12 dated 21-07-2011 of the office of the Deputy Commissioner , Uttara Kannada District, Karwar.

**PREAMBLE:**

The Central Government in exercise of the powers conferred by sub-section (1) and clause (v) of sub-section (2) of section 3 of the Environment (Protection) Act, 1986 (29 of 1986), have declared coastal stretches of seas, bays, estuaries, creeks,

rivers and backwaters which are influenced by tidal action as Coastal Regulation Zone vide the Notification read at (1) above. The Coastal Regulation Zone so declared in the said notification refers to the following areas :

(i) The land area from High Tide Line (HTL) to 500 mts on the landward side along the sea front.

(ii) Land area between HTL to 100 mts or width of the creek whichever is less on the landward side along the tidal influenced water bodies that are connected to the sea and the distance upto which development along such tidal influenced water bodies is to be regulated shall be governed by the distance upto which the tidal effects are experienced which shall be determined based on salinity concentration of 5 parts per thousand (ppt) measured during the driest period of the year.

(iii) The land area falling between the hazard line to be demarcated in accordance with the said notification and 500 mts from HTL on the landward side, in case of seafront and between the hazard line and 100 mts line in case of tidal influenced water body.

(iv) Land area between High Tide Line (HTL) and Low Tide Line (LTL) which will be termed as the intertidal zone.

(v) The water and the bed area between the LTL to the territorial water limit (12 Nm) in case of sea and the water and the bed area between LTL at the bank to the LTL on the opposite side of the bank, of tidal influenced water bodies.

The State Coastal Zone Management Authority has been given the primary responsibility of enforcing and monitoring of the provisions of the said notification as per para 6 (c) of the notification.

The Notification also mandates constitution of District Level Committee under the chairmanship of the District Magistrate concerned containing at least three representatives of local traditional coastal communities including from fisher folk to assist the State Coastal Zone Management Authority to discharge the responsibility of enforcing and monitoring of the said Notification.

District Level Coastal Zone Management Committees have already been constituted by the State Government vide Order No. FEE 16 CRZ 2002 dated 14th March 2002 even before inception of CRZ Notification, 2011 to assist the State Coastal Zone Management Authority in the enforcement of provisions of CRZ Notification, 1991 in each of the coastal districts of the State under the chairmanship of the Deputy Commissioner.

In order to fulfill the requirement of the CRZ Notification, 2011 the said district level committees are proposed to be re-constituted in accordance with para 6 (c) of the notification.

The Deputy Commissioners of the coastal districts have furnished the list of representatives of local traditional coastal communities including fisher folk to be nominated as members of the District Level Coastal Zone Management Committees vide letter read at (2) to (4) above.

The Government have decided to re-constitute the District Level Coastal Zone Management Committees of the coastal districts including the representatives suggested by the Deputy Commissioners of the concerned districts and other representatives of the concerned Departments.

Hence the Order.

**GOVERNMENT ORDER NO. FEE 155 CRZ 2011, BANGALORE, DATED: 19-10-2011.**

Pursuant to the facts traversed in the preamble, the District Level Coastal Zone Management Committees of the coastal districts viz., Dakshina Kannada, Udupi and Uttara Kannada are hereby re-constituted as under :

I District Level Coastal Zone Management Committee, Dakshina Kannada District, Mangalore :

| | | |
|---|---|---|
| 1. | The Deputy Commissioner, Dakshina Kannada District, Mangalore | Chairman |
| 2. | The Chief Executive Officer, Zilla Panchayath, Dakshina Kannada District, Mangalore. | Member |
| 3. | The Commissioner, Mangalore City Corporation, Mangalore | Member |
| 4. | The Commissioner, Mangalore Urban Development Authority, Mangalore | Member |
| 5. | The Deputy Director, Department of Mines and Geology, Dakshina Kannada District, Mangalore | Member |
| 6. | The Deputy Director of Fisheries, Dakshina Kannada District, Mangalore | Member |
| 7. | The Environmental Officer, Karnataka State Pollution Control Board, Dakshina Kannada District, Mangalore. | Member |
| 8. | Sri Nithin Kumar, Chairman, Karnataka Fisheries Development Corporation, Hoigebazar, Mangalore. | Member |
| 9. | Sri Ganesh Hosabettu, Deepak Nilaya, Chitrapura, Baikampady, Mangalore | Member |
| 10. | Sri Sadananda Bangera, Chairman, Mogaveera Mahasabha, Ullala | Member |
| 11. | The Regional Director (Env.) Department of Forest, Ecology and Environment, Mangalore | Member Secretary |

II District Level Coastal Zone Management Committee, Udupi District, Udupi :

| | | |
|---|---|---|
| 1. | The Deputy Commissioner, Udupi District, Udupi | Chairman |
| 2. | The Chief Executive Officer, Zilla Panchayath, Udupi District, Udupi | Member |
| 3. | The Senior Geologist, Department of Mines and Geology, Udupi District, Udupi | Member |
| 4. | The Assistant Director of Fisheries, Udupi District, Udupi | Member |

| | | |
|---|---|---|
| 5. | The Environmental Officer, Karnataka State Pollution Control Board, Udupi District, Udupi | Member |
| 6. | Sri Hiriyanna Kidiyooru, Chairman Malpe Meenugarara Sangha, Fisheries Harbour Malpe, Udupi Taluk | Member |
| 7. | Sri Naveenchandra, Chairman, Byndoor Valaya Nadadoni Meenugarara Sangha, Post : Uppunda, Kundapura Taluk | Member |
| 8. | Sri Narayana Karkera, "Manasa", Near Brahmasthana, Kadiptna, Padubidri, Udupi-574111 | Member |
| 9. | Sri Manjunatha B.M., Chairman, Sagara Navodaya Svasahaya Sangha, Karkikali, Uppunda, Post : Tarapathi, Kundapura Taluk | Member |
| 10. | The Regional Director (Env.) Department of Forest, Ecology and Environment, Udupi | Member Secretary |

III District Level Coastal Zone Management Committee, Uttara Kannada District, Karwar :

| | | |
|---|---|---|
| 1. | The Deputy Commissioner, Uttara Kannada District, Karwar | Chairman |
| 2. | The Chief Executive Officer, Zilla Panchayath, Uttara Kannada District, Karwar | Member |
| 3. | The Deputy Director, Department of Mines and Geology, Uttara Kannada District, Karwar | Member |
| 4. | The Deputy Director of Fisheries, Uttara Kannada District, Karwar | Member |
| 5. | The Environmental Officer, Karnataka State Pollution Control Board, Uttara Kannada District, Karwar | Member |
| 6. | Sri Ganapathi Mangre, Karwar | Member |
| 7. | Sri Appanna Kambale, Ankola | Member |
| 8. | Sri Lokesh M. Mestha, Tulasinagara, Honnavara | Member |
| 9. | Sri Vasanta Barvi, Bandar Road, Bhatkal | Member |
| 10. | Sri Dasu Harikantra, Kagala, Kumta | Member |
| 11. | The Regional Director (Env.) Department of Forest, Ecology and Environment, Uttara Kannada District, Karwar | Member Secretary |

Terms and Conditions of the constitution of the District Level Coastal Zone Management Committees (DCZMC) are as under :

(1) The DCZMC shall be primarily responsible for enforcement of the provisions of CRZ Notification, 2011 in the district concerned.

(2) The DCZMC shall assist the State Coastal Zone Management Authority in discharging the duty casted on the Authority under para 6(c) of the Notification No. S.O. 19(E) dated 06-01-2011 issued by the Ministry of Environment and Forests, Government of India under the Environment (Protection) Act, 1986 and in effective implementation of the CRZ Notification.

(3) The DCZMC shall enquire into the cases of alleged violations of the provisions of Coastal Regulation Zone Notification, 1991/2011, *suo moto* and/or on complaint/reference and report to the State Coastal Zone Management Authority/State Government and shall also take necessary actions as per the directions issued by the State Government/State Coastal Zone Management Authority to remove the violations in accordance with law.

(4) The DCZMC shall submit its reports on monthly basis or as and when the reports are called for by the State Government/State Coastal Zone Management Authority with regard to actions taken for effective enforcement of the provisions of CRZ Notification, identification of violation and recommendation thereon to the State Coastal Zone Management Authority for taking action against the violators.

(5) The DCZMC may consult/invite for its deliberations the subject specialists as and when required and taking appropriate decisions on specific matters.

(6) The DCZMC shall co-ordinate preparation of coastal zone management plan for the areas in their jurisdiction.

(7) The DCZMC shall undertake such training and awareness programmes for the preservation of the coastal zone and improving the environmental conditions.

(8) The DCZMC shall have jurisdiction over the coastal areas of the concerned revenue Districts.

(9) The DCZMC shall have a term of three years or until further orders.

(10) The DCZMC shall meet at least once in three months.

(11) The non-official members of the DCZMC shall be paid sitting fee/honorarium and admissible travel expenses in accordance with prevailing rates.

(12) The office of the Regional Director (Env.) of the concerned district shall be the secretariat of the DCZMC.

By Order and in the name of the Governor of Karnataka

**H.S. JAYARAMU**

Under Secretary to Government (I/c)

(Ecology and Environment)

Department of Forest, Ecology & Environment

PR No. 2615

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 82 ಭೂಸ್ವಾಪ್ರ 2011, ಬೆಂಗಳೂರು, ದಿನಾಂಕ : 10-11-2011**

ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕಿನ ಬಾಜೋಳಗಾ ಗ್ರಾಮದ ಹತ್ತಿರ ಇಂಗುಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ದಾಡಗಿ ಗ್ರಾಮದ ಜಮೀನಿನ ಸ.ನಂ. 94/3ಡಿನಲ್ಲಿದ್ದ 1 ಶೆಡ್, 18 ಮಾವಿನ ಮರಗಳು ಹಾಗೂ 3 ನೇರಳೆ ಗಿಡಗಳು ಹಾಗೂ ಸ.ನಂ. 95/4ರಲ್ಲಿನ 3 ಮಾವಿನ ಗಿಡಗಳಿಗೆ ಭೂಸ್ವಾಧೀನಾಧಿಕಾರಿಗಳ ಐತೀರ್ಪಿನಂತೆ ಪರಿಹಾರ ರೂ. 7,13,903-00 ಗಳನ್ನು (ಏಳು ಲಕ್ಷದ ಹದಿಮೂರು ಸಾವಿರದ ಒಂಭೈನೂರ ಮೂರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2011-12ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ರೂ. 7,13,903/-ಗಳನ್ನು ಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2010 ದಿನಾಂಕ : 20-10-2010ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2659 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕಾಡಾ ಪ್ರಾಧಿಕಾರ ಬೆಳಗಾಂವ ಅಡಿ ನಿರೀಕ್ಷಣಾ ಕೊಳವೆ ಬಾವಿಗಳನ್ನು ಹಾಗೂ ನೀರು ಕೊಳವೆ ಬಾವಿಗಳ ಹೂಳೆತ್ತಿ ಪುನಶ್ಚೇತನಗೊಳಿಸುವ ಕಾರ್ಯಕ್ರಮದಲ್ಲಿ ಎಸಗಿದ ಅನಧಿಕೃತ ವೆಚ್ಚಕ್ಕೆ ಕಾರಣರಾದವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಪತ್ರ ಸಂಖ್ಯೆ : ಜಸಂಇ 15 ಸಿಎಂಜಿ 2008, ದಿನಾಂಕ : 15-04-2009.
2. ಆಡಳಿತಾಧಿಕಾರಿಗಳು, ಬೆಳಗಾಂ ಕಾಡಾ ರವರ ಪತ್ರ ಸಂಖ್ಯೆ : ಮಘಯೋ : ಕಾಡಾಬೆ/ಸಿ-2 : ನೀಕೊಬಾ : ಶಿಸ್ತು ಪ್ರ/08-09/09-10/10-11/201, ದಿನಾಂಕ : ಇಲ್ಲ 6/2010.
3. ಆಡಳಿತಾಧಿಕಾರಿಗಳು, ಬೆಳಗಾಂ ಕಾಡಾ ರವರ ಪತ್ರ ಸಂಖ್ಯೆ : ಮಘಯೋ : ಕಾಡಾಬೆ/ಸಿ-2 : ನೀಕೊಬಾ : ಶಿಸ್ತು ಪ್ರ./08-09/09-10/10-11/76, ದಿನಾಂಕ : 30-04-2010.
4. ಆಡಳಿತಾಧಿಕಾರಿಗಳು, ಕಾಡಾ ಬೆಳಗಾಂ ರವರ ಪತ್ರ ಸಂಖ್ಯೆ : ಮಘಯೋ : ಕಾಡಾ : ಸಿ-2 : ನೀಕೊಬಾ : ಶಿಪ್ರ : ವಿಚಾರಣಾಧಿಕಾರಿ ನೇಮಕ/08-09 : 09-10/10-11/1241, ದಿನಾಂಕ : 17-03-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಪತ್ರದಲ್ಲಿ ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತ್, ವಿಜಾಪೂರ ಇವರು ಕಾಡಾ ಪ್ರಾಧಿಕಾರ, ಬೆಳಗಾಂ ಅಡಿ ನಿರೀಕ್ಷಣಾ ಕೊಳವೆ ಬಾವಿಗಳನ್ನು ಹಾಗೂ ನೀರು ಕೊಳವೆ ಬಾವಿಗಳ ಹೂಳೆತ್ತಿ ಪುನಶ್ಚೇತನ ಮಾಡಿದ ಬಗ್ಗೆ ಎಸಗಿದ ವೆಚ್ಚ ರೂ. 9,05,500/-ಗಳನ್ನು ಕೇಂದ್ರ ವಲಯದ ಯೋಜನಾ ಅಧ್ಯಾಯ ಲೆಕ್ಕ ಶೀರ್ಷಿಕೆಯಡಿ ಖರ್ಚು ಭರಿಸಲು ಸಂಬಂಧಪಟ್ಟ ಹಿಂದಿನ ಭೂ ವಿಜ್ಞಾನಿಗಳು ಮತ್ತು ಉಪ ಆಡಳಿತಾಧಿಕಾರಿಗಳು ತೆಗೆದುಕೊಂಡ ನಿರ್ಧಾರವನ್ನು ಮಹಾಲೇಖಪಾಲರು ಅನಧಿಕೃತವೆಂದು ಆಕ್ಷೇಪಿಸಿರುವುದರಿಂದ ಸದರಿ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಂಡು ವರದಿ ಸಲ್ಲಿಸುವಂತೆ ಆಡಳಿತಾಧಿಕಾರಿಗಳು, ಬೆಳಗಾಂ ರವರನ್ನು ಕೋರಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆಡಳಿತಾಧಿಕಾರಿಗಳು, ಬೆಳಗಾಂ ರವರ ಪತ್ರದಲ್ಲಿ ಪ್ರಕರಣಕ್ಕೆ ಕಾರಣರಾದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಕುರಿತಾಗಿ ಅನುಬಂಧ-1 ರಿಂದ 4ರಲ್ಲಿ ಆಪಾದನಾ ಪಟ್ಟಿಗಳನ್ನು ತಯಾರಿಸಿ ಅಧಿಕಾರಿಗಳಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆಡಳಿತಾಧಿಕಾರಿಗಳ ಪತ್ರದಲ್ಲಿ ಜಾರಿ ಮಾಡಲಾಗಿದೆಯೆಂದು ತಿಳಿಸಿದ್ದು, ಅಧಿಕಾರಿಗಳಿಂದ ಲಿಖಿತ ಹೇಳಿಕೆ ಬಂದ ನಂತರ ಮುಂದಿನ ಕ್ರಮ ಜರುಗಿಸಲಾಗುವುದೆಂಬ ಮಾಹಿತಿಯನ್ನು ಸಲ್ಲಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಆಡಳಿತಾಧಿಕಾರಿಗಳು, ಬೆಳಗಾಂ ಕಾಡಾ ರವರ ಪತ್ರದಲ್ಲಿ ಕಾಡಾ ಪ್ರಾಧಿಕಾರ ಬೆಳಗಾವಿಯಡಿ ನೀರು ಕೊಳವೆ ಬಾವಿಗಳನ್ನು ನಿರ್ಮಿಸುವ ಹಾಗೂ ಹಾಲಿ ಇರುವ ನೀರು ಕೊಳವೆ ಬಾವಿಗಳಿಂದ ಹೂಳೆತ್ತಿ ಪುನಶ್ಚೇತನಗೊಳಿಸುವ ಕಾರ್ಯಕ್ರಮಕ್ಕೆ ಅನಧಿಕೃತ ವೆಚ್ಚ ಭರಿಸಲು ಕಾರಣರಾದವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಸಂಬಂಧವಾಗಿ ಇಲಾಖಾ ವಿಚಾರಣೆ ನಡೆಸಬೇಕಾಗಿರುವುದರಿಂದ ಶ್ರೀ ಕೆ.ಆರ್. ಕೂಡಗಾನೂರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, 83 ಶಾಹೂ ನಗರ, ಬೆಳಗಾವಿ ಇವರನ್ನು ಇಲಾಖಾ ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿ ಆದೇಶಿಸುವಂತೆ ಸರ್ಕಾರವನ್ನು ಕೋರಲಾಗಿದೆ. ಇದುವರೆಗೂ ಕೆಲವು ಅಧಿಕಾರಿಗಳು ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಇವರುಗಳು ಹೇಳಿಕೆ ಸಲ್ಲಿಸುವ ಅವಧಿ ಈಗಾಗಲೇ ಮುಗಿದಿರುವುದರಿಂದ ಇವರುಗಳು ಏನಾದರೂ ಹೇಳಿಕೆ ಸಲ್ಲಿಸುವ ಅಗತ್ಯವಿದ್ದಲ್ಲಿ ವಿಚಾರಣಾ ಸಮಯದಲ್ಲಿ ಸಲ್ಲಿಸಬಹುದಾಗಿದೆ. ಆರೋಪಿತರು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸದೇ ಇರುವುದರಿಂದ ಅವರ ಹೇಳಿಕೆ ಏನೂ ಇಲ್ಲವೆಂದು ತೀರ್ಮಾನಿಸಿ, ಸದರಿ ಪ್ರಕರಣದಲ್ಲಿ ದಾಖಲೆಗಳ ಆಧಾರದ ಮೇಲೆ ಹಾಗೂ ಸಾಕ್ಷಿಗಳ ಸಮ್ಮುಖದಲ್ಲಿ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಕರ್ನಾಟಕ ನಾಗರಿಕ ಸೇವಾ (CCA)

ನಿಯಮಾವಳಿಗಳು, 1957ರ ನಿಯಮ 11ರಡಿ ಹಾಗೂ ಅದೇ ನಿಯಮಾವಳಿಯ ನಿಯಮ 13ರನ್ನು ಓದುವುದರ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಕೆ.ಆರ್. ಕೂಡಗಾನೂರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, 83 ಶಾಹೂನಗರ, ಬೆಳಗಾವಿ ರವರನ್ನು ಸದರಿ ನಿಯಮದ ನಿಯಮ 11(2)ರನ್ವಯ ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ಶೆಟ್ಟಣ್ಣನವರ್, ಉಪ ಆಡಳಿತಾಧಿಕಾರಿಗಳು, ಕಾಡಾ, ಮಲಪ್ರಭಾ ಮತ್ತು ಘಟಪ್ರಭಾ ಯೋಜನೆಗಳು, ಬೆಳಗಾಂ ಇವರನ್ನು ಸದರಿ ನಿಯಮದ ನಿಯಮ 11(5)ರನ್ವಯ ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲು ಸರ್ಕಾರ ನಿರ್ಧರಿಸಿ, ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಜಸಂಇ 15 ಸಿಎಂಜಿ 2009, ಬೆಂಗಳೂರು, ದಿನಾಂಕ : 29-10-2011**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕೆಸಿಎಸ್ (ಸಿಸಿಎ) ನಿಯಮಗಳು 1957ರ ನಿಯಮ 13ರ ಪ್ರಕಾರ ಸರ್ಕಾರವು ಕಾಡಾ ಪ್ರಾಧಿಕಾರ ಬೆಳಗಾವಿಯಡಿ ನೀರು ಕೊಳವೆ ಬಾವಿಗಳನ್ನು ನಿರ್ಮಿಸುವ ಹಾಗೂ ಹಾಲಿ ಇರುವ ನೀರು ಕೊಳವೆ ಬಾವಿಗಳಿಂದ ಹೂಳೆತ್ತಿ ಪುನಶ್ಚೇತನ ಕಾರ್ಯಕ್ರಮಕ್ಕೆ ಎಸಗಿದ ಅನಧಿಕೃತ ವೆಚ್ಚ ಸಂಬಂಧದಲ್ಲಿ ಕಾರಣರಾದ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಲಾಗಿದೆ.

1) ಶ್ರೀ ವಿ.ಎಚ್. ಪಾಟೀಲ (ನಿವೃತ್ತ), ಹಿಂದಿನ ಆಡಳಿತಾಧಿಕಾರಿಗಳು, ಕಾಡಾ, M&GP ಬೆಳಗಾಂ.
2) ಶ್ರೀ ಬಿ.ಎಲ್.ಪಾಟೀಲ (ನಿ), ಹಿಂದಿನ ಉಪ ಆಡಳಿತಾಧಿಕಾರಿಗಳು, ಕಾಡಾ, M&GP ಬೆಳಗಾಂ.
3) ಶ್ರೀ ಎಲ್.ಎಸ್.ರಾಹುತ (ನಿ), ಹಿರಿಯ ಭೂ ಭೌತ ವಿಜ್ಞಾನಿ, ಕಾಡಾ, M&GP ಬೆಳಗಾಂ.
4) ಶ್ರೀ ವಿ.ಎಂ.ಚೌರ, ಹಿಂದಿನ ಮುಖ್ಯ ಲೆಕ್ಕಾಧಿಕಾರಿಗಳು, ಕಾಡಾ, M&GP ಬೆಳಗಾಂ.
5) ಶ್ರೀ ಎಂ.ಪಿ. ಇಟ್ನಾಳ, ಹಿಂದಿನ ಸಹಾಯಕ ಭೂ ವಿಜ್ಞಾನಿ, ಕಾಡಾ, M&GP ಬೆಳಗಾಂ.

ಈ ವಿಚಾರಣೆಯಲ್ಲಿ ಸರ್ಕಾರವೇ ಶಿಸ್ತು ಪ್ರಾಧಿಕಾರಿಯಾಗಿ ಅಂತಿಮ ಆದೇಶವನ್ನು ಹೊರಡಿಸುತ್ತದೆ.

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಆರ್. ಕೊಡಗಾನೂರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, 83 ಶಾಹೂನಗರ, ಬೆಳಗಾವಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ವಿಚಾರಣಾಧಿಕಾರಿಯವರು ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ : 22 : ಸೇಇವಿ : 2007, ದಿನಾಂಕ : 11-04-2008ರಲ್ಲಿ ನಿಗದಿಪಡಿಸಿರುವಂತೆ ಸಂಭಾವನೆಯನ್ನು ಪಡೆಯಲು ಅರ್ಹರಿರುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಶೆಟ್ಟಣ್ಣನವರ್, ಉಪ ಆಡಳಿತಾಧಿಕಾರಿಗಳು, ಕಾಡಾ ಮಲಪ್ರಭಾ ಮತ್ತು ಘಟಪ್ರಭಾ ಯೋಜನೆಗಳು, ಬೆಳಗಾಂ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಆಡಳಿತಾಧಿಕಾರಿಗಳು, ಕಾಡಾ, ಬೆಳಗಾಂ ರವರು ಕ್ರಮ ಕೈಗೊಳ್ಳುವರು ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ವೆಂಕಟೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ (ಕಾಡಾ)

ಪಿ.ಆರ್. 2660

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಂ.ಎಲ್. ಪುರುಷೋತ್ತಮ್, ಪಿ.ಐ., ಮಡಿವಾಳ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ : 57/ಡಿಇ(1)ಆರ್.6/2006, ದಿನಾಂಕ : 20-03-2009.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)36/2009-10, ದಿನಾಂಕ: 05-03-2010.
3. ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 28-05-2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)36/2009-10, ದಿನಾಂಕ: 27-09-2010.
5. ಕಾರಣ ಕೇಳುವ ನೋಟೀಸ್ ಸಂಖ್ಯೆ : ಒಇ 111 ಪೊಸಿಅ 2010 ದಿನಾಂಕ : 09-05-2011.
6. ಅರ್ಜಿದಾರರ ಸಮಜಾಯಿಷಿ ದಿನಾಂಕ : 14-06-2011.
7. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 71 ಸಿಎನ್‌ಎಸ್ 11 ದಿನಾಂಕ : 11-08-2011.

**ಪ್ರಸ್ತಾವನೆ:**

ಶ್ರೀ ಎಂ.ಎಲ್. ಪುರುಷೋತ್ತಮ್, ಪಿ.ಐ., ಮಡಿವಾಳ ಪೊಲೀಸ್ ಠಾಣೆ, ಬೆಂಗಳೂರು, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಬೆಂಗಳೂರಿನ ಚಿಕ್ಕಪೇಟೆ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯ ಲೋಪ ಹಾಗೂ ದುರ್ನಡತೆಯ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಶ್ರೀ ಎಂ.ಎಲ್. ಪುರುಷೋತ್ತಮ್, ಪಿ.ಎಸ್.ಐ., ಚಿಕ್ಕಪೇಟೆ ಪೊಲೀಸ್ ಠಾಣೆ, ಹಾಲಿ ಪಿ.ಐ., ಕೋರಮಂಗಲ ಪೊಲೀಸ್ ಠಾಣೆ, ಬೆಂಗಳೂರು ನಗರ ಆದ ನೀವು ಮನೆ ನಂ. 248/1, 2ನೇ ಕ್ರಾಸ್, ರಂಗಸ್ವಾಮಿ ದೇವಸ್ಥಾನದ ರಸ್ತೆ, ಬೆಂಗಳೂರು ಈ ಮನೆಯಲ್ಲಿ ಬಾಡಿಗೆದಾರರಾಗಿದ್ದ ಶ್ರೀ ಮೋತಿಲಾಲ್ ರವರನ್ನು ಮನೆ ಖಾಲಿ ಮಾಡುವ ವಿಚಾರವಾಗಿ ದಿನಾಂಕ : 21–09–2001 ರಂದು ಠಾಣೆಗೆ ಕರೆಯಿಸಿ ಬೆಳಿಗ್ಗೆ 10.00 ಘಂಟೆಯಿಂದ ರಾತ್ರಿ 11 ಘಂಟೆಯವರೆಗೆ ಕಾನೂನು ಬಾಹಿರವಾಗಿ ಠಾಣೆಯಲ್ಲಿಟ್ಟುಕೊಂಡು, ಮನೆ ಖಾಲಿ ಮಾಡಲು ಮನೆ ಮಾಲೀಕರಾದ ಶ್ರೀ ಗೋವಿಂದರಾಜ್ ರವರಿಂದ ರೂ. 3,00,000/– ಗಳನ್ನು ಏಕೆ ಕೇಳಿರುತ್ತೀರೆಂದು ಶ್ರೀ ಮೋತಿಲಾಲ್ ರವರಿಗೆ ಲಾಠಿಯಿಂದ, ಹಾಗೂ ಬೆಲ್ಟಿನಿಂದ ಹೊಡೆದು, ಕಾಲಿನಿಂದ ಒದ್ದು ಮತ್ತು ಕೈಯಿಂದ ಪಂಚ್ ಮಾಡಿ ಅವರ ಮೂಗಿನ ಮೂಳೆಯು ಮುರಿಯುವ ಹಾಗೆ ಹೊಡೆದಿರುತ್ತೀರಿ ಇದರಿಂದ ಉಂಟಾದ ಗಾಯಗಳಿಗೆ ಶ್ರೀ ಮೋತಿಲಾಲ್ ರವರು ವಿಕ್ಟೋರಿಯ ಮತ್ತು ಸೆಂಟ್ ಜಾನ್ಸ್ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದಿರುತ್ತಾರೆ. ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ನಿಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು, ಮೋತಿಲಾಲ್ ರವರೊಂದಿಗೆ ಅಮಾನವೀಯವಾಗಿ ಹಾಗೂ ದುರ್ನಡತೆಯಿಂದ ವರ್ತಿಸಿ, ಕರ್ತವ್ಯಲೋಪವೆಸಗಿರುತ್ತೀರಿ".

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 20–09–2009ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಒಂದು ವರ್ಷ ಕಾಲ ಮುಂದೂಡಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ ಮತ್ತು ಐ.ಜಿ.ಪಿ. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 05–03–2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿಯನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರ ಮೇಲಿನ ಆರೋಪವು ಗಂಭೀರ ಸ್ವರೂಪದ್ದಾಗಿದ್ದು, ಸದರಿ ಆರೋಪವು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದ್ದು, ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿರದೆ ಕಡಿಮೆ ದಂಡನೆಯನ್ನು ವಿಧಿಸಲಾಗಿದೆಯೆಂದು ತೀರ್ಮಾನಿಸಿ ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25(2)(ಬಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅರ್ಜಿದಾರರಿಗೆ ವಿಧಿಸಿದ ದಂಡನೆಯನ್ನು ಹೆಚ್ಚಿಸುವ ಬಗ್ಗೆ ಓದಲಾದ (5)ರಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿಮಾಡಿ ಸಮಜಾಯಿಷಿಯನ್ನು ಕೋರಲಾಗಿತ್ತು. ಓದಲಾದ (6)ರಲ್ಲಿ ಅರ್ಜಿದಾರರು ನೀಡಲಾದ ಸಮಜಾಯಿಷಿಯನ್ನು ಪರಿಶೀಲಿಸಿದ್ದು, ಯಾವುದೇ ಸಮರ್ಥನೀಯ ಅಂಶಗಳು ಇಲ್ಲದಿರುವುದರಿಂದ ದಂಡನೆಯನ್ನು ಹೆಚ್ಚಿಸುವ ಬಗ್ಗೆ ಓದಲಾದ (7)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 111 ಪೊಸಿಅ 2010, ಬೆಂಗಳೂರು, ದಿನಾಂಕ: 09–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಕಲಂ 25(2)(ಬಿ) ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎಲ್. ಪುರುಷೋತ್ತಮ್, ಪಿ.ಐ., ಮಡಿವಾಳ ಪೊಲೀಸ್ ಠಾಣೆ, ಬೆಂಗಳೂರು, ಇವರಿಗೆ ದಿನಾಂಕ : 20–03–2009ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯನ್ನು ಮಾರ್ಪಡಿಸಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಮೂರು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 2661

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಸುಧೇಶಶೆಟ್ಟಿ, ಸಿ.ಪಿ.ಸಿ.–1772, ಬ್ರಹ್ಮಾವರ ಪೊಲೀಸ್ ಠಾಣೆ, ಉಡುಪಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ : ಐಜಿಪಿ/ಅಲಾನಿ/ಸಿಬ್ಬಂದಿ/128/08–09, ದಿನಾಂಕ : 13–04–2009.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು(4)/33/2009–10 (ಓ.ಬಿ. ಸಂಖ್ಯೆ : 46/2009–10) ದಿನಾಂಕ: 16–12–2009.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 16–04–2010.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/12/2010–11, ದಿನಾಂಕ: 31–03–2011.

**ಪ್ರಸ್ತಾವನೆ:**

ಶ್ರೀ ಸುಧೇಶಶೆಟ್ಟಿ, ಸಿ.ಪಿ.ಸಿ., ಬ್ರಹ್ಮಾವರ ಪೊಲೀಸ್ ಠಾಣೆ, ಇವರು ಈ ಹಿಂದೆ ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಲೋಪ ಹಾಗೂ ದುರ್ನಡತೆ ಆರೋಪದ ಮೇಲೆ ಇವರ

ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ಉಡುಪಿ ಜಿಲ್ಲೆ ಪೊಲೀಸ್ ಅಧೀಕ್ಷಕರವರ ವರ್ಗಾವಣೆ ಆದೇಶ ಸಂಖ್ಯೆ : ಸಿಬ್ಬಂದಿ-1/46/ಓಬಿ/2008-09 ದಿನಾಂಕ : 04-03-2008ರಂತೆ ನೀವು ಉಡುಪಿ ಜಿಲ್ಲೆ ಶಂಕರನಾರಾಯಣ ಪಿ.ಎಸ್. ನಿಂದ ಅನ್ಯ ಕಾರ್ಯ ನಿಮಿತ್ತ (ಓಓಡಿ) ದಿನಾಂಕ : 20-03-2008ರಂದು ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಉಡುಪಿ ಜಿಲ್ಲೆ, ಇಲ್ಲಿ ವರದಿ ಮಾಡಿಕೊಂಡಿದ್ದು ನೀವು ವರದಿ ಮಾಡಿಕೊಂಡಾಗಿನಿಂದಲೂ ಯಾವುದೇ ರೀತಿಯ ಉಪಯುಕ್ತವಾದ ಕಾರ್ಯವನ್ನು ಈ ವಿಭಾಗದಲ್ಲಿ ಮಾಡಿರುವುದಿಲ್ಲವೆಂದು, ನಿಮಗೆ ಮೇಲಾಧಿಕಾರಿಯವರು ಕಳ್ಳಭಟ್ಟಿ ತಯಾರಿಕೆ/ಅಕ್ರಮ ಸ್ಪಿರಿಟ್ ಕಳ್ಳ ಸಾಗಾಣಿಕೆ, ನಕಲಿ ಮದ್ಯ ತಯಾರಿಕೆ ಬಗ್ಗೆ ವಿಶೇಷವಾದ ಮಾಹಿತಿಯನ್ನು ಸಂಗ್ರಹಿಸಿ ಎಂದು ಸಲಹೆ ಸೂಚನೆಗಳನ್ನು ನೀಡಿದ್ದರೂ/ನೀಡುತ್ತಿದ್ದರೂ ನೀವು ಇದುವರೆವಿಗೂ ಯಾವುದೇ ರೀತಿಯಾದ ವಿಶೇಷ ಮಾಹಿತಿಯನ್ನು ಸಂಗ್ರಹಿಸದಿರುವುದು, ಮೇಲಾಧಿಕಾರಿಗಳಿಗೆ ಮಾಹಿತಿ ತಿಳಿಸದಿರುವುದು ಕಂಡುಬಂದಿದೆ. ನೀವು ಕೆಲವೊಂದು ಕಳ್ಳಭಟ್ಟಿ ದಂಧೆ ನಡೆಸುವವರೊಂದಿಗೆ ಮತ್ತು ನಕಲಿ ಮದ್ಯ ತಯಾರಿಸುವ ವ್ಯಕ್ತಿಗಳೊಂದಿಗೆ ಸಂಪರ್ಕ ಹೊಂದಿರುವುದಾಗಿ ತಿಳಿದುಬಂದಿದೆ. ನಿಮಗೆ ವಹಿಸಿದಂತಹ ಕಾರ್ಯವನ್ನು ಸಮರ್ಪಕವಾಗಿ ನಿರ್ವಹಿಸದೇ ಇಲಾಖೆಯ ಗುಪ್ತ ವಿಷಯಗಳನ್ನು ಮತ್ತು ಮೇಲಾಧಿಕಾರಿಗಳ ಚಲನವಲನಗಳನ್ನು ಕಳ್ಳಭಟ್ಟಿ ನಕಲಿ ಮದ್ಯ ತಯಾರು ಮಾಡುವ ಮತ್ತು ಸಾಗಾಣಿಕೆ ಮಾಡಿ ಮಾರಾಟ ಮಾಡುವ ವ್ಯಕ್ತಿಗಳಿಗೆ ಅನಧಿಕೃತವಾಗಿ ಮಾಹಿತಿಯನ್ನು ನೀಡಿ ಈ ಇಲಾಖೆಗೆ ಮತ್ತು ಸರ್ಕಾರಕ್ಕೆ ದ್ರೋಹ ಬಗೆಯುವ ಕಾರ್ಯದಲ್ಲಿ ತೊಡಗಿರುವುದು ಕಂಡು ಬಂದಿದೆ. ಈ ರೀತಿಯ ನಿಮ್ಮ ವರ್ತನೆ ಈ ವಿಭಾಗದ ಮೇಲಾಧಿಕಾರಿಗಳಿಗೆ ಮತ್ತು ಇತರೇ ಸಿಬ್ಬಂದಿಯವರಿಗೆ ಸಮರ್ಪಕವಾಗಿ ಕರ್ತವ್ಯ ನಿರ್ವಹಿಸುವ ಕುರಿತಂತೆ ತೊಡಕುಂಟು ಮಾಡುತ್ತದೆ. ಈ ರೀತಿ ಮಾಡುವುದರಿಂದ ಈ ಇಲಾಖೆಗೆ ಕೆಟ್ಟ ಹೆಸರು ಬರುವುದರೊಂದಿಗೆ ಕಳ್ಳದಂಧೆ ನಡೆಸುವ ದುಷ್ಟ ಶಕ್ತಿಗಳಿಗೆ ಪ್ರೋತ್ಸಾಹ ನೀಡಿದಂತೆ ಆಗುತ್ತದೆಯಾದ್ದರಿಂದ ಮತ್ತು ಮೇಲ್ಕಂಡ ಆರೋಪಗಳಲ್ಲಿ ಭಾಗಿಯಾಗಿರುವುದರಿಂದ ಇಲಾಖಾ ವಿಚಾರಣೆಯನ್ನು ಬಾಕಿಯಿರಿಸಿ ಕೆ.ಎಸ್.ಪಿ. (ಡಿಪಿ) ರೂಲ್ಸ್ 1956 ನಿಯಮ 6ರ ರೀತ್ಯಾ ಈ ತಕ್ಷಣದಿಂದ ಜಾರಿಗೆ ಬರುವಂತೆ ಈಗಾಗಲೇ ಅಮಾನತ್ತಿನಲ್ಲಿರಿಸಲಾಗಿರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 13-04-2009ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು 2 ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡಲಾಗಿದೆ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ ಮತ್ತು ಐ.ಜಿ.ಪಿ. ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ : 16-12-2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 63 ಪೊಸಿಅ 2010, ಬೆಂಗಳೂರು, ದಿನಾಂಕ: 16-11-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸುಧೇಶಶೆಟ್ಟಿ, ಸಿ.ಪಿ.ಸಿ., ಬ್ರಹ್ಮಾವರ ಪೊಲೀಸ್ ಠಾಣೆ, ಉಡುಪಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. ನಂ. 2662

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ಕೆ. ಕಾಂಬಳೆ, ಸಹಾಯಕ ಆಡಳಿತಾಧಿಕಾರಿಯವರ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ :**

1. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : ಸಿಬಿ(8)107/2007-08 ದಿನಾಂಕ : 10-01-2009.
2. ಶ್ರೀ ಎಸ್.ಕೆ. ಕಾಂಬಳೆ, ಸಹಾಯಕ ಆಡಳಿತಾಧಿಕಾರಿ ರವರ ಮೇಲ್ಮನವಿ ದಿನಾಂಕ : 13-04-2009.
3. ಡಿಜಿ. ಮತ್ತು ಐಜಿಪಿ ರವರ ಪತ್ರ ಸಂಖ್ಯೆ : ಸಿಬಿ(8)107/2007-08 ದಿನಾಂಕ : -08-2009.
4. ಕರ್ನಾಟಕ ಲೋಕಸೇವಾ ಆಯೋಗ ಪತ್ರ ಸಂಖ್ಯೆ : ಪಿಎಸ್‌ಸಿ 97 ಸಿಎನ್‌ಎಸ್ 2011 ದಿನಾಂಕ : 22-09-2011.

**ಪ್ರಸ್ತಾವನೆ:**

ಶ್ರೀ ಎಸ್.ಕೆ. ಕಾಂಬಳೆ, ಸಹಾಯಕ ಆಡಳಿತಾಧಿಕಾರಿ, ಜಿಲ್ಲಾ ಪೊಲೀಸ್ ಕಛೇರಿ, ಗದಗ ಜಿಲ್ಲೆ, ರವರ ವಿರುದ್ಧ ಈ ಕೆಳಕಂಡ ಆರೋಪಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 12ರ ಪ್ರಕಾರ ದೋಷಾರೋಪಣೆ ಪತ್ರವನ್ನು ದಿನಾಂಕ : 03-06-2008ರಂದು ಡಿಜಿ ಮತ್ತು ಐಜಿಪಿ ರವರು ಹೊರಡಿಸಿರುತ್ತಾರೆ.

"ಸದರಿಯವರು ಜಿಲ್ಲಾ ಪೊಲೀಸ್ ಕಛೇರಿ, ಗದಗ್ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಗದಗ್ ಜಿಲ್ಲೆಯಲ್ಲಿ ಓಓಡಿ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಸಿಬ್ಬಂದಿಗಳ ವರ್ಗಾವಣೆಗಳನ್ನು ತಕ್ಷಣವೇ ರದ್ದುಗೊಳಿಸುವಂತೆ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್, ಉತ್ತರ ವಲಯ, ಬೆಳಗಾಂ ರವರು ಸೂಚಿಸಿದ್ದರೂ ಸಹ ಶ್ರೀಮತಿ ಎಲ್.ಎಂ.ಖಾನಾಪುರ, ಸ್ವೀಪರ್, ಡಿಎಆರ್, ಗದಗ ರವರು ಓಓಡಿ ಮೇಲೆ ಕರ್ತವ್ಯ ನಿರ್ವಹಿಸುತ್ತಿದ್ದ ಬಗ್ಗೆ ಮೇಲಾಧಿಕಾರಿಗಳ ಗಮನಕ್ಕೆ ತರದೇ, ಓಓಡಿ ಆದೇಶವನ್ನು ರದ್ದು ಮಾಡಲು ಯಾವುದೇ ಕ್ರಮ ಕೈಗೊಳ್ಳದೇ ಅವರನ್ನು ಜಿಲ್ಲಾ ಪೊಲೀಸ್ ಕಛೇರಿಯಲ್ಲಿಯೇ ಓಓಡಿಯ ಮೇಲೆ ಮುಂದುವರೆಯಲು ಅವಕಾಶ ಮಾಡಿಕೊಟ್ಟು, ಮೇಲಾಧಿಕಾರಿಗಳ ಆದೇಶದ ಬಗ್ಗೆ ತಾತ್ಸಾರ ಮನೋಭಾವನೆಯನ್ನು ತೋರ್ಪಡಿಸಿ ಕರ್ತವ್ಯದಲ್ಲಿ ಕರ್ತವ್ಯಚ್ಯುತಿ, ಅತೀವ ನಿರ್ಲಕ್ಷತೆ, ಅವಿಧೇಯತೆ, ಬೇಜವಾಬ್ದಾರಿತನವನ್ನು ಪ್ರದರ್ಶಿಸಲಾಗಿರುತ್ತದೆ."

ಶ್ರೀ ಎಸ್.ಕೆ. ಕಾಂಬಳೆ, ಸಹಾಯಕ ಆಡಳಿತಾಧಿಕಾರಿ ರವರು ದೋಷಾರೋಪಣಾ ಪತ್ರವನ್ನು ಸ್ವೀಕರಿಸಿ ಸಮಜಾಯಿಷಿಯನ್ನು ಸಲ್ಲಿಸಿರುತ್ತಾರೆ. ಸಮಜಾಯಿಷಿಯನ್ನು ಮತ್ತು ಸಂಬಂಧಿಸಿದ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಮೇಲಧಿಕಾರಿಗಳ ಆದೇಶವನ್ನು ಪಾಲಿಸದೇ ಗುರುತರವಾದ ಅಪರಾಧವನ್ನು ಮಾಡಿರುವುದು ದೃಢಪಟ್ಟಿರುವುದೆಂದು ಪರಿಗಣಿಸಿ ಶಿಸ್ತು ಪ್ರಾಧಿಕಾರವಾದ ಡಿಜಿ ಮತ್ತು ಐಜಿಪಿ ರವರು ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

"ಶ್ರೀ ಎಸ್.ಕೆ. ಕಾಂಬಳೆ, ಸಹಾಯಕ ಆಡಳಿತಾಧಿಕಾರಿ, ಜಿಲ್ಲಾ ಪೊಲೀಸ್ ಕಛೇರಿ, ಗದಗ್ ಜಿಲ್ಲೆ ರವರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡಲಾಗಿರುತ್ತದೆ".

ಈ ಆದೇಶದ ವಿರುದ್ಧ ಶ್ರೀ ಎಸ್.ಕೆ. ಕಾಂಬಳೆ, ಸಹಾಯಕ ಆಡಳಿತಾಧಿಕಾರಿ ರವರು 13–04–2009 ರಂದು ಸರ್ಕಾರಕ್ಕೆ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ. ಆರೋಪಿತ ಅಧಿಕಾರಿ ಎಸ್.ಕೆ. ಕಾಂಬಳೆರವರು ತಮ್ಮ ಮೇಲ್ಮನವಿ ದಿನಾಂಕ : 13–04–2009ರಲ್ಲಿ ತಾವು ಎ.ಎ.ಓ. ಗದಗ ಜಿಲ್ಲೆಯ ಪೊಲೀಸ್ ಅಧೀಕ್ಷಕರವರ ಕಛೇರಿಯಲ್ಲಿ ಹಾಜರಾಗುವುದಕ್ಕೆ ಮೊದಲೇ ಶ್ರೀ ಎಲ್.ಎಂ. ಖಾನಾಪೂರ ರವರು ಒಒಡಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಇದು ಗೊತ್ತಿರಲಿಲ್ಲವೆಂದೂ, ವಿಷಯ ನಿರ್ವಾಹಕರು ಒಒಡಿ ರದ್ದುಪಡಿಸುವ ಆದೇಶದಲ್ಲಿ ಇವರ ಹೆಸರು ಕೈಬಿಟ್ಟಿದ್ದು ತಾವು ಕರ್ತವ್ಯ ಲೋಪ ಎಸಗಿರುವುದಿಲ್ಲವೆಂದೂ, ತಾವು 34 ವರ್ಷಗಳ ಸೇವೆ ಸಲ್ಲಿಸಿ ಯಾವುದೇ ರೀತಿಯಿಂದಲೂ ನಿರ್ಲಕ್ಷ ತೋರದೇ ಜವಾಬ್ದಾರಿಯಿಂದ ಮೇಲಧಿಕಾರಿಗಳ ಆದೇಶ ಚಾಚೂ ತಪ್ಪದೆ ಪಾಲಿಸಿಕೊಂಡು ಕರ್ತವ್ಯ ನಿರ್ವಹಿಸುತ್ತಿರುವುದಾಗಿಯೂ, ವಿಧಿಸಿರುವ ದಂಡನೆ ಆದೇಶವನ್ನು ರದ್ದುಪಡಿಸಿ, ನಿರ್ದೋಷಿ ಎಂದು ಯೋಗ್ಯ ನ್ಯಾಯ ದೊರಕಿಸಿಕೊಡಬೇಕೆಂದು ಕೋರಿರುತ್ತಾರೆ.

ಡಿಜಿ ಮತ್ತು ಐಜಿಪಿರವರು ತಮ್ಮ ಪತ್ರ ದಿನಾಂಕ : 28–05–2011ರಲ್ಲಿ ಈ ಪ್ರಕರಣದಲ್ಲಿ ಸಹಾಯಕ ಆಡಳಿತಾಧಿಕಾರಿಗಳ ವಿರುದ್ಧ ಶಿಸ್ತು ಕ್ರಮಕ್ಕೆ ಶಿಫಾರಸ್ಸು ಮಾಡಿರುವ ಅಧಿಕಾರಿಗಳ ವಿಷಯ ನಿರ್ವಾಹಕರು ಮತ್ತು ಶಾಖಾಧೀಕ್ಷಕರು ಕರ್ತವ್ಯ ಲೋಪಕ್ಕೆ ನೇರ ಹೊಣೆಗಾರರಾಗಿರುತ್ತಾರೆಂದೂ, ಸಹಾಯಕ ಆಡಳಿತಾಧಿಕಾರಿಗಳ ನಿರ್ಲಕ್ಷತೆ ತದನಂತರ ಕಂಡುಬಾರದೇ ಇರುವುದರಿಂದ, ಇವರ ಮೇಲ್ಮನವಿಯನ್ನು ಪರಿಗಣಿಸಬೇಕೆಂದು ಕೋರಿರುತ್ತಾರೆ. ಆದರೆ, ಇವರು ಸದರಿ ಹುದ್ದೆಯ ಪ್ರಭಾರ ವಹಿಸಿಕೊಂಡಾಗ ಒಒಡಿಯಲ್ಲಿ ಯಾರ್ಯಾರು ಕೆಲಸ ನಿರ್ವಹಿಸುತ್ತಿದ್ದಾರೆ ಎಂಬ ಬಗ್ಗೆ ತನಿಖೆ ಕೈಗೊಂಡು, ತದನಂತರ ಆದೇಶ ಹೊರಡಿಸಿದ್ದರೆ ಈ ರೀತಿಯ ತಪ್ಪಾಗುತ್ತಿರಲಿಲ್ಲ. ಈ ಕಾರಣದಿಂದ, ಇವರ ಪರಿಷ್ಕರಣೆ ಮೇಲ್ಮನವಿಯನ್ನು ಪೂರ್ಣವಾಗಿ ಪುರಸ್ಕರಿಸಲು ಸಮರ್ಥನೆ ಇರುವುದಿಲ್ಲ. ಆದುದರಿಂದ, ಇವರ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ, ಇವರಿಗೆ ಈಗಾಗಲೇ ವಿಧಿಸಿರುವ "ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡುವ" ದಂಡನೆಗೆ ಬದಲಾಗಿ ಇವರಿಗೆ "ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 8(iii) ರನ್ವಯ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಮುಂದೂಡುವ ದಂಡನೆಯನ್ನು" ವಿಧಿಸಲು ತೀರ್ಮಾನಿಸಿ ಮೇಲೆ ಓದಲಾದ (4)ರಲ್ಲಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಪಡೆಯಲಾಗಿರುತ್ತದೆ. ಅದರನ್ವಯ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 67 ಪೊಸಿಅ 2009, ಬೆಂಗಳೂರು, ದಿನಾಂಕ: 16–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎಸ್.ಕೆ. ಕಾಂಬಳೆ, ಸಹಾಯಕ ಆಡಳಿತಾಧಿಕಾರಿ, ಜಿಲ್ಲಾ ಪೊಲೀಸ್ ಕಛೇರಿ, ಗದಗ್ ಜಿಲ್ಲೆ ಇವರು ಸಲ್ಲಿಸಿದ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ, ಶಿಸ್ತು ಪ್ರಾಧಿಕಾರವು ದಿನಾಂಕ : 10–12–2009ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಭಾಗಶಃ ಮಾರ್ಪಡಿಸಿ ಅವರಿಗೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 8(iii)ರನ್ವಯ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಪಿ.ಆರ್. ನಂ. 2663

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಒಳಾಡಳಿತ ಸಚಿವಾಲಯ

**ವಿಷಯ :** ಮಾನ್ಯ ಉಚ್ಚ ನ್ಯಾಯಾಲಯದ ಸರ್ಕ್ಯೂಟ್ ಬೆಂಚ್, ಧಾರವಾಡ ರವರಿಂದ ಹೊರಡಿಸಲಾದ ವಾರೆಂಟ್ ಕ್ರಿ.ಎ.ನಂ. 611/05ರ ಬಜಾವಣೆಗೆ (ಜಾರಿಗಾಗಿ) ನೇಪಾಳ ದೇಶಕ್ಕೆ ಹೋಗಲು ಸರ್ಕಾರದ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**

1. ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ : ಅಪರಾಧ/8/ಉ.ಕ/ಪವ/11, ದಿನಾಂಕ : 21–04–2011.
2. ಪೊಲೀಸ್ ಮಹಾ ನಿರೀಕ್ಷಕ ಕಛೇರಿ ಪಶ್ಚಿಮ ವಲಯ ಮಂಗಳೂರು ರವರ ಪತ್ರ ಸಂಖ್ಯೆ : ಅಪರಾಧ/2/12/ಪ.ವ/2011 ದಿನಾಂಕ : 25–08–2011.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಸರ್ಕ್ಯೂಟ್ ಬೆಂಚ್, ಧಾರವಾಡ ರವರ ಕ್ರಿಮಿನಲ್ ಅರ್ಜಿ ನಂ. 611/2005ರಲ್ಲಿ ಪಂಚಮಗಿರಿ ಬಾಬಾ ಬಿನ್ ಶಿವಗಿರಿ ಬಾಬಾ ಸಾದು ಸಾ; ಪಶುಪದಿನ, ಪೋಸ್ಟ್, ಅನುಪಮಾ ಭಂಡಾರಿ ಆಶ್ರಮ, ಕಾಟ್ಮಂಡು, ನೇಪಾಳ ದೇಶ ಇವರ ವಿರುದ್ಧ ಜಾಮೀನು ರಹಿತ ವಾರೆಂಟ್

ಜಾರಿಗೊಳಿಸಲು ಶ್ರೀ ಎಸ್.ಎಂ. ರಘುಪತಿ ಪಿ.ಎಸ್.ಐ. ಮತ್ತು ಶ್ರೀ ಲೋಕೇಶ ಸಿ.ಪಿ.ಸಿ. 1571 ಇವರನ್ನು ನೇಪಾಳ ದೇಶಕ್ಕೆ ಕಳುಹಿಸಲು ಅನುಮತಿ ನೀಡುವಂತೆ ಹಾಗೂ ಅನುದಾನ ಬಿಡುಗಡೆಗೊಳಿಸಲು ಮಂಜೂರಾತಿಯನ್ನು ನೀಡುವಂತೆ ಅನುದಾನದ ತಪಾಸಣಾ ಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು ಮೇಲೆ ಓದಲಾದ (1)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಶ್ರೀ ಎಸ್.ಎಂ.ರಘುಪತಿ, ಪಿ.ಎಸ್.ಐ. ರವರ ವೇತನ ರೂ. 12,000/– ಹಾಗೂ ಲೋಕೇಶ ಸಿ.ಪಿ.ಸಿ. 1571 ರವರ ವೇತನ ರೂ. 6,500/– ಗಳಾಗಿದ್ದು, ಕೆ.ಸಿ.ಎಸ್.ಆರ್. ನಿಯಮ 487 (1)(ಎ) ರನ್ವಯ ಪ್ರಸ್ತಾಪಿತ ಸಿಬ್ಬಂದಿಗಳು ನೇಪಾಳಕ್ಕೆ ತೆರಳಿ ಎನ್.ಬಿ.ಡಬ್ಲ್ಯೂ. ಜಾರಿಗೊಳಿಸಲು ಸಾಧ್ಯವಾಗುವುದಿಲ್ಲ. ಸದರಿಯವರನ್ನು ದಿನಾಂಕ : 06–06–2011ರೊಳಗೆ ಎನ್.ಬಿ.ಡಬ್ಲ್ಯೂ. ಜಾರಿ ಮಾಡಲು ಧಾರವಾಡ ಸರ್ಕ್ಯೂಟ್ ಬೆಂಚ್ ಆದೇಶ ಹೊರಡಿಸಿರುತ್ತದೆ. ಪ್ರಸ್ತುತ ಇಂತಹ ತುರ್ತು ಹಾಗೂ ನ್ಯಾಯಾಲಯ ನಿರ್ದೇಶನಗಳ ಹಿನ್ನೆಲೆಯಲ್ಲಿ ವಿಮಾನಯಾನ ಕೈಗೊಳ್ಳಲು ಮೇಲಿನ ಪೊಲೀಸ್ ಸಿಬ್ಬಂದಿಗಳಿಗೆ ಅನುಮತಿಸುವ ಬಗ್ಗೆ ಮಂಜೂರಾತಿ ನೀಡುವಂತೆಯೂ ಕೋರಲಾಗಿರುತ್ತದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 161 ಹೊಸಇ 2011, ಬೆಂಗಳೂರು, ದಿನಾಂಕ: 15–11–2011**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಕರ್ನಾಟಕ ಉಚ್ಚ ನ್ಯಾಯಾಲಯದ ಸರ್ಕ್ಯೂಟ್ ಬೆಂಚ್, ಧಾರವಾಡ ರವರಿಂದ ಹೊರಡಿಸಲಾಗಿರುವ ಕ್ರಿಮಿನಲ್ ಅರ್ಜಿ ನಂ. 611/2005ರಲ್ಲಿ ಪಂಚಮಗಿರಿ ಬಾಬಾ ಬಿನ್ ಶಿವಗಿರಿ ಬಾಬಾ ಸಾದು ಸಾ: ಪಶುಪದಿನ, ಪೋಸ್ಟ್ ಅನುಪಮಾ ಭಂಡಾರಿ ಆಶ್ರಮ, ಕಾಟ್ಮಂಡು ನೇಪಾಳ ದೇಶ ಇವರ ವಿರುದ್ಧ ಜಾಮೀನು ರಹಿತ ವಾರೆಂಟ್ ಜಾರಿಗೊಳಿಸಲು ಶ್ರೀ ಎಸ್.ಎಂ. ರಘುಪತಿ ಪಿ.ಎಸ್.ಐ. ಮತ್ತು ಶ್ರೀ ಲೋಕೇಶ, ಸಿ.ಪಿ.ಸಿ. 1571 ಇವರನ್ನು ನೇಪಾಳ ದೇಶಕ್ಕೆ ಕಳುಹಿಸಲು ಸರ್ಕಾರದ ಅನುಮತಿಯನ್ನು ಹಾಗೂ ಇದಕ್ಕೆ ತಗಲುವ ವೆಚ್ಚವನ್ನು ಭರಿಸಲು ಸರ್ಕಾರದಿಂದ ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ತನ್ನ ದಿನಾಂಕ : 12–01–2011 ರಲ್ಲಿನ ಟಿಪ್ಪಣಿಯಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. ನಂ. 2664

## FOREST, ECOLOGY AND ENVIRONMENT SECRETARIAT

**Sub:** Diversion of 1.00 ha. (one hectare) of forest land in Mangalore Division, Dakshina Kannada District for development of Rehabilitation colony project for displaced families in favour of the Managing Director, Special Economic Zone, Mangalore.

***Read:***

1. Letter No. A5(3)GFL.CR.23/08-09 dated : 18-01-2010 of the Principal Chief Conservator of Forests, Bangalore.
2. State Government letter No. FEE 12 FLL 2010, dated : 01-02-2010.
3. Letter No. 4-KRC681/2010-BAN/7214, dated : 31-05-2010 of Government of India, Ministry of Environment and Forests, Regional Office, South Zone, Bangalore.
4. Letter No. A5(2)GFL.CR.23/08-09 dated : 22-07-2011 of the Principal Chief Conservator of Forests, Bangalore.
5. State Government letter No. FEE 12 FLL 2010, dated : 21-09-2011.
6. Letter No. 4-KRC681/2010-BAN/997, dated : 24-10-2011 of Government of India, Ministry of Environment and Forests, Regional Office, South Zone, Bangalore.

**PREAMBLE:**

The Principal Chief Conservator of Forests, Bangalore vide his letter No. A5(3)GFL.CR.23/08-09, dated : 18-01-2010 of read at (1) above has submitted the proposal obtain the approval of Government of India under Section 2 of the Forest (Conservation) Act, 1980 for diversion of 8.094 ha. of forest land in Mangalore Division, Dakshina Kannada District for development of Rehabilitation Colony project for displaced families in favour of the Managing Director, Special Economic Zone, Mangalore subject to certain conditions.

Accordingly, the proposal was recommended to Government of India vide State Government letter dated : 01-02-2010 read at (2) above.

The Government of India, Ministry of Environment and Forests, Regional Office, Bangalore vide their letter dated : 31-05-2010 read at (3) above has given its approval in Principle (Stage-I) diversion of 1.0 ha. of forest land in Mangalore Division, Dakshina Kannada District for relocation of place of workship of the displaced families due to Mangalore SEZ Project in favour of the Managing Director, Special Economic Zone, Mangalore subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated : 22-07-2011 read at (4) above furnished the compliance report and the same has been sent to Government of India vide State Government letter dated : 21-09-2011 read at (5) above.

Government of India, Ministry of Environment and Forests, Regional Office, South Zone, Bangalore vide their letter dated : 24-10-2011 read at (6) above conveyed its approval (Stage-II) under Section 2 of the Forest (Conservation) Act, 1980 for diversion of 1.0 ha. of forest land in Mangalore Division, Dakshina Kannada District for relocation of place of worship of the displaced families due to Mangalore SEZ Project in favour of the Managing Director, Special Economic Zone, Mangalore subject to certain conditions.

The proposal has been examined in detail and hence the order.

**GOVERNMENT ORDER NO. FEE 12 FLL 2010, BANGALORE, DATED: 28-10-2011.**

In the circumstances explained in the preamble above, Government are pleased to accord sanction under section (2) of Forest (Conservation) Act 1980 for diversion of 1.00 ha. (one hectare) of forest land in Mangalore Division, Dakshina Kannada District for relocation of place of worship of the displaced families due to Mangalore SEZ Project in favour of the Managing Director, Special Economic Zone, Mangalore subject to the following conditions :

1. The legal status of forest land shall remain unchanged.
2. Demarcation of proposed forest area shall be carried out by erecting cement concrete pillars duly numbered at an interval of 20 mts. At the cost of user agency.
3. Compensatory afforestation shall be raised over 1.00 ha. identified non-forest land in Sy. No. 110/1A of Thokur Village at the cost of user agency. The State Government shall obtain prior permission of Central Government for change of location and schedule of compensatory afforestation, if any.
4. Non forest land for compensatory afforestation shall be notified by the State Government as P.F./R.F. and Nodal Officer (FCA) shall report the compliance within 6 months.
5. The additional amount of the Net Present Value (NPV) of the diverted forest land if any becoming due after revision of the same by the Hon'ble Supreme Court of India in future, shall be charged by the State Government from the user agency and the same shall be transferred to either in SB A/c. No. SB 01025213-CAF, Karnataka, Corporation Bank, CGO Complex, Lodhi Road, New Delhi-110 003 (RTGS/IFSC No. CORP0000371) or in SB A/c No. 3449002010105 421-KARNATAKA CAMPA, Union Bank of India, Sundar Nagar, New Delhi-110 003 (RTGS/IFSC No. UBINO534498).
6. The total forest area utilized for the project shall not exceed 1.00 ha. In case the land is not taken over by the user agency or the same is not used for the stipulated purpose with in a period of two years, then the area shall be taken back by the Forest Department.
7. The land shall be utilized only for the purpose for which it is released.
8. If the land is not required for the purpose for which it is granted the same should be resumed back to the Forest Department by the Deputy Conservator of Forests under Section 82 of the Karnataka Forest Act 1963.
9. The user agency has to pay the lease rent as fixed by the Government at the time of sanction and any subsequent orders in this regard.
10. The lease shall be period of 20 years.
11. The Karnataka Forest Act, 1963 and Rules, 1969 will be applicable for any violation.
12. The user agency has to pay the cost of raising compensatory afforestation charges at the rate prevailing at the time of sanction (at 1,05,000-00 per ha.)
13. The user agency has to pay the Net Present Value as per the Hon'ble Supreme Court of India Orders dated : 28-03-2008 and 09-05-2008.
14. Only minimum number of trees shall be cut based on actual requirement of the project.
15. The user agency shall pay the extraction and transportation charges of trees as estimated by the Deputy Conservator of Forests from the proposed land.
16. Any other conditions to be imposed by the Government of India/Government of Karnataka/Principal Chief Conservator of Forests imposed from time to time for protection, improvement of flora and fauna in the forest area and public convenience shall also be applicable will be abided by the lessee.

By Order and in the name of the Governor of Karnataka

**G.H. ANASUYAMMA**

Under Secretary to Government

Forest, Ecology and Environment Department.

PR No. 2665

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಡಾ. ವಿ. ಚಂದ್ರಶೇಖರ್, ಐ.ಎ.ಎಸ್. ಇವರಿಗೆ ಗಳಿಕೆ ರಜೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 430 ಎಸ್‌ಎಎಸ್ 2011, ದಿನಾಂಕ: 24–08–2011.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 443 ಎಸ್‌ಎಎಸ್ 2011, ದಿನಾಂಕ: 29–08–2011.
3. ಡಾ. ವಿ. ಚಂದ್ರಶೇಖರ್, ಐ.ಎ.ಎಸ್., ಇವರ ದಿನಾಂಕ: 20–09–2011ರ ಪತ್ರ.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ: 24–08–2011ರ ಅಧಿಸೂಚನೆಯನ್ವಯ ಡಾ. ವಿ. ಚಂದ್ರಶೇಖರ್, ಐ.ಎ.ಎಸ್. ವ್ಯವಸ್ಥಾಪಕ ನಿರ್ದೇಶಕರು, ಹಟ್ಟಿ ಚಿನ್ನದ ಗಣಿ ನಿಯಮಿತ, ಬೆಂಗಳೂರು ಹುದ್ದೆಯಿಂದ ವರ್ಗಾಯಿಸಿ ಸದರಿ ಹುದ್ದೆಗೆ ಶ್ರೀ ಎನ್. ಶ್ರೀರಾಮನ್, ಐ.ಎ.ಎಸ್., ಇವರನ್ನು ಅಧಿಕ ಪ್ರಭಾರದಲ್ಲಿ ನೇಮಿಸಲಾಗಿತ್ತು. ಅದರಂತೆ ಅಧಿಕಾರಿಯವರು ದಿನಾಂಕ: 29–08–2011ರ ಅಹರಾಹ್ನ ಸದರಿ ಹುದ್ದೆಯ ಪ್ರಭಾರವನ್ನು ಶೀ ಎನ್. ಶ್ರೀರಾಮನ್, ಐ.ಎ.ಎಸ್., ಇವರಿಗೆ ವಹಿಸಿ ನೇಮಕಾತಿ ನಿರೀಕ್ಷಣೆಯಲ್ಲಿದ್ದರು. ತದನಂತರ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ:

29–08–2011ರ ಅಧಿಸೂಚನೆಯನ್ವಯ ನೇಮಕಾತಿ ನಿರೀಕ್ಷಣೆಯಲ್ಲಿರುವ ಈ ಅಧಿಕಾರಿಯ ಸೇವೆಯನ್ನು ವ್ಯವಸ್ಥಾಪಕ ನಿರ್ದೇಶಕರು, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ, ಬೆಂಗಳೂರು ಹುದ್ದೆಗೆ ನೇಮಕ ಮಾಡುವ ಸಲುವಾಗಿ ವಸತಿ ಇಲಾಖೆಯ ವಶಕ್ಕೆ ನೀಡಲಾಗಿತ್ತು. ಸದರಿ ಆದೇಶದಂತೆ ಅಧಿಕಾರಿಯವರು ದಿನಾಂಕ: 02–09–2011ರ ಪೂರ್ವಾಹ್ನ ಸದರಿ ಹುದ್ದೆಯ ಪ್ರಭಾರ ವಹಿಸಿಕೊಂಡಿರುತ್ತಾರೆ. ಈ ಸನ್ನಿವೇಶಗಳ ಹಿನ್ನೆಲೆಯಲ್ಲಿ ದಿನಾಂಕ: 30–08–2011ರ ರಿಂದ 01–09–2011ರವರೆಗೆ ಕಳೆದ ಅವಧಿಯನ್ನು ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಪರಗಣಿಸಿ ಸಕ್ರಮಗೊಳಿಸುವಂತೆ ಶ್ರೀಯುತರು ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ದಿನಾಂಕ: 20–09–02011ರ ಪತ್ರದಲ್ಲಿ ಕೋರಿರುತ್ತಾರೆ.

ಅಧಿಕಾರಿಯವರು ನೇಮಕಾತಿ ನಿರೀಕ್ಷಣೆಯಲ್ಲಿರುವಾಗ ಅವರಿಗೆ ನೇಮಕಾತಿ ಆದೇಶ ಹೊರಡಿಸಿರುವ ಹಿನ್ನೆಲೆಯಲ್ಲಿ ಹಾಗೂ ಕೇಂದ್ರ ಸ್ಥಾನದಲ್ಲಿ ಬದಲಾವಣೆ ಇಲ್ಲದಿದ್ದರಿಂದ ಅವರು ಆದೇಶ ಹೊರಡಿಸಿದ ಮರುದಿನ ಅಂದರೆ ದಿನಾಂಕ: 30–08–2011ರಂದೇ ವರ್ಗಾಯಿಸಿದ ಹುದ್ದೆಯ ಪ್ರಭಾರ ವಹಿಸಿಕೊಳ್ಳಬೇಕಾಗಿತ್ತು. ಆದರೆ ಅವರು ದಿನಾಂಕ: 31–08–2011 ರಂದು ಮತ್ತು ದಿನಾಂಕ: 01–09–2011 ರಂದು ಲಭ್ಯವಿದ್ದ ಸಾರ್ವತ್ರಿಕ ರಜಾ ದಿನಗಳನ್ನು ಉಪಯೋಗಿಸಿಕೊಂಡ ನಂತರ ದಿನಾಂಕ: 02–09–2011ರ ಪೂರ್ವಾಹ್ನ ಕರ್ತವ್ಯ ವರದಿ ಮಾಡಿಕೊಂಡಿರುತ್ತಾರೆ. ಈ ಹಿನ್ನೆಲೆಯಲ್ಲಿ ದಿನಾಂಕ: 30–08–2011 ರಂದೇ ವರ್ಗಾವಣೆ ಹೊಂದಿದ ಹುದ್ದೆಗೆ ಹಾಜರಾಗದೇ ಮೇಲ್ಕಂಡ ಸಾರ್ವತ್ರಿಕ ರಜೆಗಳನ್ನು ಉಪಯೋಗಿಸಿಕೊಂಡು ದಿನಾಂಕ: 02–09–2011ರಂದು ಕರ್ತವ್ಯಕ್ಕೆ ಹಾಜರಾಗಿರುವುದರಿಂದ ಒಂದು ದಿನ ಗಳಿಕೆ ರಜೆಯೆಂದು ಪರಿಗಣಿಸಬೇಕಾದ ಸನ್ನಿವೇಶ ಒದಗಿ ಬಂದಿರುತ್ತದೆ. ಆದ್ದರಿಂದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 169 ಎಸ್‌ಐಎಸ್ 2011, ಬೆಂಗಳೂರು, ದಿನಾಂಕ: 11ನೇ ನವೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ. ವಿ. ಚಂದ್ರಶೇಖರ್, ಐ.ಎ.ಎಸ್., ಇವರು ವರ್ಗಾವಣೆ ಹೊಂದಿದ ಹುದ್ದೆಗೆ ಸರ್ಕಾರ ಹೊರಡಿಸಿದ ಅಧಿಸೂಚನೆಗೆ ಮರುದಿನವೇ ಹಾಜರಾಗದಿದ್ದರಿಂದ ದಿನಾಂಕ: 30–08–2011 ರಂದು ಕಳೆದ ಅವಧಿಯನ್ನು ಒಂದು ದಿನ ಗಳಿಕೆ ರಜೆ ಎಂದು ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಶ್ರೀನಿವಾಸಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ ಇಲಾಖೆ (ಸೇವೆಗಳು–1)

ಪಿ.ಆರ್. ನಂ. 2676

## COMMERCE AND INDUSTRIES SECRETARIAT

**Sub:** Appointment of Sri. M. Maheshwar Rao, IAS, as one of the Directors on the Board of Directors of KTPO.

**Read:**
1. Notification No. CI/247/SAS/2011, Dated: 13-05-2011.
2. Letter No. KTPO/PS/2011-12/1891, dated: 08-08-2011 of Managing Director, KTPO, Bangalore.

**PREAMBLE:**

Sri M. Maheshwar Rao, IAS has been appointed as Commissioner for Industrial Development and Director of Industries and Commerce in place of Sri Rajkumar Khatri, vide Notification refund at (1) above. The Managing Director, KTPO has requested to appoint Sri M. Maheshwar Rao, IAS, as new Director vide his letter read at (2) above.

The matter has been examined by Govt. hence the following Order.

**Government Order No. CI 3 SPI 2009, Bangalore Dated: 10-11-2011**

Government is pleased to appoint Sri M. Maheshwar Rao, IAS, Commissioner for Industrial Development and Director of Industries and Commerce as one of the Directors on Board of Directors of Karnataka Trade Promotion Organisation (KTPO) with immediate effect and until further orders.

By Order and in the name of the Governor of Karnataka
**A.V. Srinivasa Dikshit**
Desk Officer (Technical Cell)
Commerce & Industries Department

PR No. 2677

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ವಿ. ಹನುಮಂತರಾಯಪ್ಪ, ತಹಶೀಲ್ದಾರ್, ವಿರಾಜ ಪೇಟೆ ತಾಲ್ಲೂಕು, ಮಡಿಕೇರಿ ಜಿಲ್ಲೆ ಇವರ ಹಿಂದಿನ ಸೇವೆಯನ್ನು ಪರಿಗಣಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 51 ಎಎಸ್‌ಡಿ 2008, ದಿನಾಂಕ: 23–05–2008.
2. ಶ್ರೀ ವಿ. ಹನುಮಂತರಾಯಪ್ಪ, ತಹಶೀಲ್ದಾರ್ ಇವರ ಪತ್ರ ದಿನಾಂಕ: 11–06–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 11–06–2008ರ ಅಧಿಸೂಚನೆಯನ್ವಯ ಶ್ರೀ ವಿ. ಹನುಮಂತರಾಯಪ್ಪ, ಇವರು ಕಂದಾಯ ಇಲಾಖೆಯ ತಹಶೀಲ್ದಾರ್, ಗುಂಪು–ಬಿ ಹುದ್ದೆಗೆ ನೇಮಕಗೊಂಡಿರುತ್ತಾರೆ. ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ: 11–06–2008ರ ಪತ್ರದಲ್ಲಿ ಸದರಿಯವರು, ಕಂದಾಯ ಇಲಾಖೆಯಲ್ಲಿ ಸೇವೆ ಪ್ರಾರಂಬಿಸುವ ಪೂರ್ವದಲ್ಲಿ ಗೃಹ ಇಲಾಖೆಯಲ್ಲಿ, ಪೊಲೀಸ್ ಪೇದೆಯಾಗಿ ದಿನಾಂಕ: 20–11–2002 ರಿಂದ ಸಲ್ಲಿಸಿರುವ ಸೇವೆಯನ್ನು ನಿವೃತ್ತಿ ವೇತನ ಸೌಲಭ್ಯಗಳಿಗೆ ಪರಿಗಣಿಸುವಂತೆ ಕೋರಿರುತ್ತಾರೆ.

ಶ್ರೀಯುತರ ಮನವಿಯನ್ನು ಹಾಗೂ ಅವರ ಸೇವಾ ಪುಸ್ತಕವನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಶ್ರೀ ವಿ. ಹನುಮಂತರಾಯಪ್ಪ, ಇವರು ಡಿಸಿಪಿ:ಸಿಎಆರ್ ಕೇಂದ್ರ, ಬೆಂಗಳೂರು ರವರ ಆದೇಶ ಸಂಖ್ಯೆ: ಸಿಬ್ಬಂದಿ–1:34:2001–2002, ದಿನಾಂಕ: 23–11–2002 ರನ್ವಯ ಬೆಂಗಳೂರು ನಗರ ಶಸಸ್ತ್ರ ಮೀಸಲು ಪಡೆಯಲ್ಲಿನ ಸಿಎಆರ್ ಪೇದೆ ಹುದ್ದೆಗೆ ನೇಮಕಗೊಂಡಿದ್ದು, ದಿನಾಂಕ: 20–11–2002 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ನಂತರ,

ಸಹಾಯಕ ಪೊಲೀಸ್ ಕಮೀಷನರ್-1 ನಗರ ಸಶಸ್ತ್ರ ಮೀಸಲು ಪಡೆ (ದಕ್ಷಿಣ) ಬೆಂಗಳೂರು ರವರ ಜ್ಞಾಪನ ಸಂಖ್ಯೆ: ಸಿಸಿ/222/ಎಸಿಪಿ-1/2008-09, ದಿನಾಂಕ: 02-06-2008 ರನ್ವಯ ದಿನಾಂಕ: 02-06-2008 ರಂದು ತಹಶೀಲ್ದಾರ್ ಗ್ರೂಪ್-ಬಿ ಹುದ್ದೆಗೆ ನೇಮಕಗೊಳ್ಳಲು ಸದರಿ ಸೇವೆಯಿಂದ ಬಿಡುಗಡೆ ಹೊಂದಿರುತ್ತಾರೆ.

ಮೇಲಿನ ಅಂಶಗಳನ್ನು ಪರಿಗಣಿಸಿ ಶ್ರೀ ವಿ. ಹನುಮಂತರಾಯಪ್ಪ, ತಹಶೀಲ್ದಾರ್, ವಿರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ ಇವರು ಗೃಹ ಇಲಾಖೆಯಲ್ಲಿ ಪೊಲೀಸ್ ಪೇದೆಯಾಗಿ ದಿನಾಂಕ: 20-11-2002 ರಿಂದ 02-06-2008 ರವರೆಗಿನ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 224 (ಎ) ರನ್ವಯ ಪ್ರಸ್ತುತ ಸೇವೆಗೆ ನಿವೃತ್ತಿ ವೇತನ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ನಿರ್ಧರಿಸಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 302 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 29-10-2011**

ಮೇಲೆ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ವಿ. ಹನುಮಂತರಾಯಪ್ಪ, ತಹಶೀಲ್ದಾರ್, ವಿರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ ಇವರು ಕಂದಾಯ ಇಲಾಖೆಯ ಸೇವೆಗೆ ಸೇರುವ ಪೂರ್ವದಲ್ಲಿ ಗೃಹ ಇಲಾಖೆಯಲ್ಲಿ ಪೊಲೀಸ್ ಪೇದೆಯಾಗಿ ದಿನಾಂಕ: 20-11-2002 ರಿಂದ 02-06-2008 ರವರೆಗೆ ಸಲ್ಲಿಸಲಾಗಿರುವ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 224(ಎ) ರೀತ್ಯ ಸದರಿಯವರ ಪ್ರಸ್ತುತ ತಹಶೀಲ್ದಾರ್ ಹುದ್ದೆಯ ನಿವೃತ್ತಿ ವೇತನ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ (ವೆಚ್ಚ-7) ರವರ ಟಿಪ್ಪಣಿ ಸಂಖ್ಯೆ: ಆ.ಇ. 1048 ವೆಚ್ಚ-7/2009, ದಿನಾಂಕ: 18-11-2009ರಲ್ಲಿ ನೀಡಿರುವ ಸಹಮತದೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಗೋಪಾಲಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. ನಂ. 2678

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಹೆಚ್. ನಂಜಯ್ಯ, ಹಿಂದಿನ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು ಇವರ ವಿರುದ್ಧದ ಇಲಾಖಾ ವಿಚಾರಣೆ ಕುರಿತು ಅಂತಿಮ ಆದೇಶ.

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 5 ಎಡಿಇ 2009, ದಿನಾಂಕ: 08-04-2009.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 5 ಎಡಿಇ 2009, ದಿನಾಂಕ: 05-09-2009.
3. ಸರ್ಕಾರದ ಆದೇಶ ಸಂಖ್ಯೆ: ಕಂಇ 5 ಎಡಿಇ 2009, ದಿನಾಂಕ: 26-05-2010.
4. ವಿಚಾರಣಾಧಿಕಾರಿಯವರ ದಿನಾಂಕ: 03-09-2011 ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಶ್ರೀ ಹೆಚ್. ನಂಜಯ್ಯ, ಹಿಂದಿನ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು ಪ್ರಸ್ತುತ ತಹಶೀಲ್ದಾರ್, ಶಿಷ್ಟಾಚಾರ, ಜಿಲ್ಲಾಧಿಕಾರಿಗಳ ಕಛೇರಿ, ಧಾರವಾಡ ಹಾಲಿ, ಓ.ಓ.ಡಿ. ಆಧಾರದ ಮೇಲೆ ಅಸಿಸ್ಟೆಂಟ್ ಆಡಿಟ್ ಆಫೀಸರ್, ಕಂದಾಯ ಸಚಿವಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಾಲ್ಲೂಕಿನ ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಅನುಗೊಂಡನಹಳ್ಳಿ ಹೋಬಳಿ ನಾರಾಯಣಕೆರೆ ಗ್ರಾಮದ ಸರ್ವೆ ನಂ. 131/3 ರ ವಿಸ್ತೀರ್ಣ 1 ಎಕರೆ 25 ಗುಂಟೆ ಜಮೀನಿಗೆ ಸಂಬಂಧಿಸಿದಂತೆ ಉಪ ವಿಭಾಗಾಧಿಕಾರಿ, ದೊಡ್ಡಬಳ್ಳಾಪುರ ಉಪ ವಿಭಾಗ, ಬೆಂಗಳೂರು ರವರು, ಪ್ರಕರಣ ಸಂಖ್ಯೆ: ಎಲ್‌ಆರ್‌ಎಫ್ (ಎಚ್.ಕೆ.ಟಿ) 144/1998-99 ರ ಪ್ರಕರಣದಲ್ಲಿ ದಿನಾಂಕ: 07-04-2003 ರಂದು ಹೊರಡಿಸಿರುವ ಆದೇಶವು ಅಸಲಿ ಆದೇಶವೇ ಅಥವಾ ನಕಲಿ ಆದೇಶವೇ ಎಂಬುದನ್ನು ಖಾತರಿ ಪಡಿಸಿಕೊಳ್ಳದೇ, ನ್ಯಾಯಾಲಯದ ಆದೇಶ ಮಾಡಿದ್ದು, ಸದರಿ ಆದೇಶದ ಸದರಿ ಆದೇಶದ ಮೇಲೆ ಮುಟೇಷನ್ ಅಂಗೀಕರಿಸಲು ಕಾರಣರಾಗಿರುತ್ತಾರೆ ಎಂಬ ಆರೋಪದ ಹಿನ್ನಲೆಯಲ್ಲಿ, ಮೇಲೆ ಓದಲದ ಕ್ರಮ ಸಂಖ್ಯೆ: (1)ರ ದಿನಾಂಕ: 08-04-2009 ರ ಸರ್ಕಾರದ ಆದೇಶದಲ್ಲಿ ಇಲಾಖಾ ವಿಚಾರಣೆ ಕಾಯ್ದಿರಿಸಿ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ದಿನಾಂಕ: 05-09-2009 ರ ಸರ್ಕಾರದ ಆದೇಶದಲ್ಲಿ ಶ್ರೀ ಹೆಚ್. ನಂಜಯ್ಯ, ಹಿಂದಿನ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ಇವರ ಅಮಾನತ್ತನ್ನು ತೆರವುಗೊಳಿಸಿ, ಇವರಿಗೆ ಸ್ಥಳ ನಿಯುಕ್ತಗೊಳಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ದಿನಾಂಕ: 26-05-2010ರ ಸರ್ಕಾರದ ಆದೇಶದಲ್ಲಿ, ಶ್ರೀ ಹೆಚ್. ನಂಜಯ್ಯ, ಹಿಂದಿನ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು ಇವರ ವಿರುದ್ಧ ಮಾಡಲಾದ ಆರೋಪದ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳುವ ಸಲುವಾಗಿ ಇಲಾಖಾ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4) ರ ದಿನಾಂಕ: 03-09-2011 ರ ವಿಚಾರಣಾ ವರದಿಯಲ್ಲಿ ವಿಚಾರಣಾಧಿಕಾರಿಗಳು ಪ್ರಕರಣದ ಕುರಿತು ಕೂಲಂಕಷವಾಗಿ ವಿಚಾರಣೆ ನಡೆಸಿ The charge levelled against the D.O is not proved and he is entitled to be exonerated ಎಂಬುದಾಗಿ ವರದಿ ಸಲ್ಲಿಸಿರುತ್ತಾರೆ.

ಆರೋಪಿತ ಅಧಿಕಾರಿಯ ವಿರುದ್ಧ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಅವರ ವಿರುದ್ಧ ಮಾಡಲಾದ ಆರೋಪಗಳಿಂದ ದೋಷಮುಕ್ತಗೊಳಿಸಿ, ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಬಿಡಬಹುದೆಂದು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 5 ಎಡಿಇ 2009, ಬೆಂಗಳೂರು, ದಿನಾಂಕ: 04-11-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ ಹೆಚ್. ನಂಜಯ್ಯ, ಹಿಂದಿನ ತಹಶೀಲ್ದಾರ್, ಹೊಸಕೋಟೆ ತಾಲ್ಲೂಕು ಪ್ರಸ್ತುತ ತಹಶೀಲ್ದಾರ್, ಶಿಷ್ಟಾಚಾರ, ಜಿಲ್ಲಾಧಿಕಾರಿಗಳ ಕಛೇರಿ, ಧಾರವಾಡ ಹಾಲಿ ಓ.ಓ.ಡಿ. ಆಧಾರದ ಮೇಲೆ ಅಸಿಸ್ಟೆಂಟ್ ಆಡಿಟ್ ಆಫಿಸರ್, ಕಂದಾಯ ಸಚಿವಾಲಯ ಬಹುಮಹಡಿಗಳ ಕಟ್ಟಡ, ಬೆಂಗಳೂರು ಇವರ ವಿರುದ್ಧದ ಆರೋಪಗಳಿಂದ ದೋಷಮುಕ್ತಗೊಳಿಸಿ, ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆದೇಶಿಸಿದೆ.

(1) ಇವರ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಲಾಗಿದೆ.

(2) ತತ್ಸಂಬಂಧ ಲಭ್ಯವಾಗಬಹುದಾದ ನಿಯಮಾನುಸಾರ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೋಪಾಲಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. ನಂ. 2679

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ, ಹೋಬಳಿ, ಆವಲಹಳ್ಳಿ ಗ್ರಾಮದ ಸ.ನಂ. 79 ರಲ್ಲಿ 5.00 ಎಕರೆ ಜಮೀನನ್ನು ಮಿಥಿಕ್ ಸೊಸೈಟಿ ಇಂಡಾಲಜಿ ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್ಎನ್‌ಡಿ (ಎನ್ಇ) ಸಿಆರ್ 301/10-11, ದಿನಾಂಕ: 08-04-2011 ಮತ್ತು 03-09-2011.

ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು ಮೇಲೆ ಓದಲಾದ ಪತ್ರಗಳಲ್ಲಿ ಸರ್ಕಾರಕ್ಕೆ ವರದಿ ಮಾಡುತ್ತಾ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಆವಲಹಳ್ಳಿ ಗ್ರಾಮದ ಸ.ನಂ. 79ರಲ್ಲಿ 10.00 ಎಕರೆ ಜಮೀನನ್ನು ಮಿಥಿಕ್ ಸೊಸೈಟಿ ಇಂಡಾಲಜಿ ಇವರಿಗೆ ಮಂಜೂರು ಮಾಡುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

2. ಜಿಲ್ಲಾಧಿಕಾರಿಗಳ ವರದಿಯನ್ವಯ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಆವಲಹಳ್ಳಿ ಗ್ರಾಮದ ಸ.ನಂ. 79ರಲ್ಲಿ ಒಟ್ಟು 103.30 ಎಕರೆ ಜಮೀನಿದ್ದು, ಸರ್ಕಾರಿ ಗೋಮಾಳ ಎಂದು ವರ್ಗೀಕರಿಸಿರುತ್ತದೆ. ಈ ಪೂರಾ ಜಮೀನಿನ ಮೇಲೆ ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 136(3)ರಡಿಯಲ್ಲಿ ವಿಶೇಷ ಜಿಲ್ಲಾಧಿಕಾರಿಗಳ ನ್ಯಾಯಾಲಯದಲ್ಲಿ ಪ್ರಕರಣ ದಾಖಲಾಗಿದ್ದು, ಈ ಪೈಕಿ ಜಿಲ್ಲಾಧಿಕಾರಿಯವರ ಆದೇಶದಂತೆ 22.00 ಎಕರೆ ಜಮೀನಿಗೆ ಪ್ರಕರಣ ಇತ್ಯರ್ಥವಾಗಿದ್ದು, ಸರ್ಕಾರದ ವಶಕ್ಕೆ ಪಡೆಯಲಾಗಿರುತ್ತದೆ. ಈ ಪೈಕಿ 10.00 ಎಕರೆ ಸರ್ಕಾರಿ ಗೋಮಾಳ ಜಮೀನನ್ನು ಮಿಥಿಕ್ ಸೊಸೈಟಿ ಇಂಡಾಲಜಿ ಇವರಿಗೆ ಮಂಜೂರು ಮಾಡುವ ಬಗ್ಗೆ ಸ್ಕೆಚ್ ತಯಾರಿಸಿರುತ್ತಾರೆ. ಸದರಿ ಜಮೀನಿನ ಮಾರುಕಟ್ಟೆ ಬೆಲೆಯು ಎಕರೆಯೊಂದಕ್ಕೆ ರೂ. 80 ಲಕ್ಷಗಳಾಗಿರುತ್ತದೆ ಹಾಗೂ ಮಾರ್ಗಸೂಚಿ ಬೆಲೆಯು ಎಕರೆಯೊಂದಕ್ಕೆ ರೂ. 60 ಲಕ್ಷಗಳಾಗಿರುತ್ತದೆ.ಈ ಜಮೀನು ದೊಡ್ಡಬಳ್ಳಾಪುರ ಮುಖ್ಯ ರಸ್ತೆಯಿಂದ 1 ಕಿ.ಮೀ. ದೂರದಲ್ಲಿರುತ್ತದೆ ಎಂಬುದಾಗಿ ವರದಿ ಮಾಡಿದ್ದಾರೆ.

3. ಮಿಥಿಕ್ ಸೊಸೈಟಿಯು ಮೈಸೂರು ಸೊಸೈಟೀಸ್ ರೆಗ್ಯೂಲೇಷನ್ ಆಕ್ಟ್ ಅಡಿಯಲ್ಲಿ ನಂ. 111 ಆಫ್ 1904 ರಂತೆ ನೋಂದಣಿಯಾಗಿರುವುದು ಸಂಸ್ಥೆಯವರು ನೀಡಿರುವ ಆಡಿಟ್ ವರದಿಯಿಂದ ತಿಳಿದುಬರುತ್ತದೆ. ಸಂಸ್ಥೆಯು ಹಿಂದಿನ 5 ವರ್ಷಗಳ ಆಡಿಟ್ ವರದಿಯನ್ನು ಸಲ್ಲಿಸಿರುತ್ತಾರೆ. ಸಂಸ್ಥೆಯವರು ಸದರಿ ಜಮೀನನ್ನು ಭಾರತೀಯ ಶಾಸ್ತ್ರ ಅಧ್ಯಯನ ಕೇಂದ್ರ ಪುರಾತತ್ವ ಮತ್ತು ಶಾಸನ ಶಾಸ್ತ್ರಗಳ ಅಧ್ಯಯನ ಕೇಂದ್ರ, ತಾಳೆಗರಿ ಹಸ್ತ ಪ್ರತಿಗಳ ಸಂರಕ್ಷಣೆ ಅಧ್ಯಯನ ಕೇಂದ್ರ, ಗ್ರಂಥಾಲಯ ಮತ್ತು ವಿದ್ಯಾರ್ಥಿ ನಿಲಯ, ವಿದ್ವಾಂಸರಿಗೆ ವಸತಿ ನಿಲಯ, ಅಧ್ಯಯನ ಕೊಠಡಿ ಇವುಗಳನ್ನೊಳಗೊಂಡ ಕ್ಯಾಂಪಸ್‌ಗಾಗಿ ಮಂಜೂರಾತಿ ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 385 ಎಲ್‌ಜಿಬಿ 2011, ಬೆಂಗಳೂರು, ದಿನಾಂಕ: 28-10-2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಯಲಹಂಕ ಹೋಬಳಿ, ಆವಲಹಳ್ಳಿ ಗ್ರಾಮದ ಸ.ನಂ. 79ರಲ್ಲಿನ 103.30 ಎಕರೆ ಸರ್ಕಾರಿ ಗೋಮಾಳ ಜಮೀನಿನ ಪೈಕಿ 10.00 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4) ರಡಿಯಲ್ಲಿನ ಅವಕಾಶದಂತೆ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಸದರಿ 10.00 ಎಕರೆ ಜಮೀನನ್ನು ಮಾರ್ಗಸೂಚಿ ಬೆಲೆಯ ಶೇ. 30ರಷ್ಟು ವಿಧಿಸಿ ಮಿಥಿಕ್ ಸೊಸೈಟಿ ಇಂಡಾಲಜಿ ಇವರಿಗೆ ಭಾರತೀಯ ಶಾಸ್ತ್ರ, ಅಧ್ಯಯನ, ಪುರಾತತ್ವ ಮತ್ತು ಶಾಸನ ಶಾಸ್ತ್ರಗಳ ಅಧ್ಯಯನ, ತಾಳೆಗರಿ ಹಸ್ತ ಪ್ರತಿಗಳ ಸಂರಕ್ಷಣೆ ಅಧ್ಯಯನ ಕೇಂದ್ರ, ಗ್ರಂಥಾಲಯ ಮತ್ತು ವಿದ್ಯಾರ್ಥಿ ನಿಲಯ, ವಿದ್ವಾಂಸರಿಗೆ ವಸತಿ ನಿಲಯ, ಅಧ್ಯಯನ ಕೊಠಡಿ ಇವುಗಳನ್ನೊಳಗೊಂಡ ಕ್ಯಾಂಪಸ್ ಸ್ಥಾಪನೆಗಾಗಿ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕೆ. ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ.ಮಂ)

ಪಿ.ಆರ್. ನಂ. 2680

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಂ.ಆರ್. ಹಿರೇಮಠ್, ಮುಖ್ಯ ಆಡಳಿತಾಧಿಕಾರಿಗಳು, ಕಾಲೇಜು ಶಿಕ್ಷಣ ಇಲಾಖೆ, ಪ್ರಸ್ತುತ ಉಪ ಆಯುಕ್ತರು (ಭೂಸ್ವಾ) ಬಿ.ಡಿ.ಎ. ಬೆಂಗಳೂರು ಇವರ ಜನ್ಮ ದಿನಾಂಕದ ತಿದ್ದುಪಡಿ ಕುರಿತು.

**ಓದಲಾಗಿದೆ :**
1. ಶ್ರೀ. ಎಂಆರ್. ಹಿರೇಮಠ್, ಮುಖ್ಯ ಆಡಳಿತಾಧಿಕಾರಿಗಳು, ಕಾಲೇಜು ಶಿಕ್ಷಣ ಇಲಾಖೆ ಇವರ ದಿನಾಂಕ: 30–08–2011 ರ ಪತ್ರ.
2. ಮುಖ್ಯಾಧಿಕಾರಿ, ಪುರಸಭೆ, ನರಗುಂದ ಇವರ ಪತ್ರ ಸಂಖ್ಯೆ: ಪುಸನ/ಆವಿ/ಜ&ಮ/ವಹಿ/2011–12/332, ದಿನಾಂಕ: 10–09–2011.
3. ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಟಿಪ್ಪಣಿ ಸಂಖ್ಯೆ: ಲಾ 165 ಎಲ್ಎಜಿ 2011, ದಿನಾಂಕ: 10–01–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1) ರ ದಿನಾಂಕ: 30–08–2011 ರ ಪತ್ರದಲ್ಲಿ ಶ್ರೀ ಎಂ. ಆರ್. ಹಿರೇಮಠ್, ಮುಖ್ಯ ಆಡಳಿತಾಧಿಕಾರಿಗಳು, ಕಾಲೇಜು ಶಿಕ್ಷಣ ಇಲಾಖೆ, ಇವರು ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 88 ಎಎಸ್‌ಡಿ 1986, ದಿನಾಂಕ: 04–12–1986 ನೇ ತಂಡದಲ್ಲಿ ಪ್ರೊಬೇಷನರಿ ತಹಶೀಲ್ದಾರರಾಗಿ ನೇಮಕಾತಿ ಹೊಂದಿರುವುದಾಗಿ ತಿಳಿಸುತ್ತಾ, ದಾಖಲೆಗಳಲ್ಲಿ ತಮ್ಮ ಜನ್ಮ ದಿನಾಂಕವು 21–07–1957 ಎಂದು ತಪ್ಪಾಗಿ ನಮೂದಾಗಿರುತ್ತದೆ. ಆದರೆ, ತಮ್ಮ ನೈಜ್ಯ ಜನ್ಮ ದಿನಾಂಕವು 28–03–1958 ಎಂದು ಇರುವುದಕ್ಕೆ ಪೂರಕವಾದ ಟೌನ್ ಮುನ್ಸಿಪಾಲಿಟಿ ನರಗುಂದ ಇವರಿಂದ ಪಡೆದ ಜನನ ಪ್ರಮಾಣ ಪತ್ರವನ್ನು ನೀಡಿ, ಸೇವಾ ದಾಖಲೆಗಳಲ್ಲಿ ತಮ್ಮ ಜನ್ಮ ದಿನಾಂಕವನ್ನು ತಿದ್ದುಪಡಿ ಮಾಡುವಂತೆ ಕೋರಿರುತ್ತಾರೆ.

ಶ್ರೀ. ಎಂ.ಆರ್. ಹಿರೇಮಠ್, ಮುಖ್ಯ ಆಡಳಿತಾಧಿಕಾರಿಗಳು, ಕಾಲೇಜು ಶಿಕ್ಷಣ ಇಲಾಖೆ, ಇವರು ಒದಗಿಸಿರುವ ತಮ್ಮ ಜನನ ಪ್ರಮಾಣ ಪತ್ರದ ಬಗ್ಗೆ ಸದರಿಯವರ ಜನ್ಮ ದಿನಾಂಕದ ದಾಖಲೆ, ವಹಿಯ ದೃಢೀಕೃತ ಪ್ರತಿಯನ್ನು ಒದಗಿಸುವಂತೆ ಮುಖ್ಯಾಧಿಕಾರಿ ಪುರಸಭೆ, ನರಗುಂದ ಇವರನ್ನು ಕೋರಲಾಗಿತ್ತು. ಅದರಂತೆ, ಮೇಲೆ ಓದಲಾದ ಕ್ರ.ಸಂ. (2) ರ ದಿನಾಂಕ: 10–09–2011 ರ ಪತ್ರದಲ್ಲಿ ಮುಖ್ಯಾಧಿಕಾರಿ ಪುರಸಭೆ, ನರಗುಂದ ಇವರು ಶ್ರೀ ಎಂ. ಆರ್. ಹಿರೇಮಠ್ ಇವರ ಜನ್ಮ ದಿನಾಂಕದ ದಾಖಲೆ ವಹಿಯ ಪ್ರತಿಯನ್ನು ದೃಢೀಕರಿಸಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (3) ರ ದಿನಾಂಕ : 10–10–2011ರ ಕಾನೂನು ಮತ್ತು ಮಾನವ ಹಕ್ಕುಗಳ ಇಲಾಖೆಯ ಟಿಪ್ಪಣಿಯಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋನಿರ್ಧಾರ) ಕಾಯ್ದೆ 1974 ರ ಸೆಕ್ಷನ್ 5(3) ರನ್ವಯ ಶ್ರೀ ಎಂ. ಆರ್. ಹಿರೇಮಠ್, ಮುಖ್ಯ ಆಡಳಿತಾಧಿಕಾರಿಗಳು, ಕಾಲೇಜು ಶಿಕ್ಷಣ ಇಲಾಖೆ, ಇವರ ಜನ್ಮ ದಿನಾಂಕ ತಿದ್ದುಪಡಿ ಮಾಡುವ ಸಲುವಾಗಿ ವಿಚಾರಣೆಯನ್ನು ನಡೆಸಲು ಸಹಾಯಕ ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ, (ವ್ಯಾಜ್ಯ–6) ಕಾನೂನು ಮತ್ತು ಮಾನವ ಹಕ್ಕುಗಳ ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ಹಾಗೂ ವಾದೇಕ್ಷಕರು ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ (ಅಭಿಪ್ರಾಯ) ಕಾನೂನು ಮತ್ತು ಮಾನವ ಹಕ್ಕುಗಳ ಇಲಾಖೆ ರವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸುವಂತೆ ಕೋರಿರುತ್ತಾರೆ.

ಮೇಲ್ಕಂಡ ಅಂಶದ ಹಿನ್ನೆಲೆಯಲ್ಲಿ, ಶ್ರೀ. ಎಂ.ಆರ್. ಹಿರೇಮಠ್, ಮುಖ್ಯ ಆಡಳಿತಾಧಿಕಾರಿಗಳು, ಕಾಲೇಜು ಶಿಕ್ಷಣ ಇಲಾಖೆ, ಇವರ ಜನ್ಮ ದಿನಾಂಕ ತಿದ್ದುಪಡಿ ಮಾಡುವ ಸಲುವಾಗಿ ವಿಚಾರಣೆಯನ್ನು ನಡೆಸಲು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋನಿರ್ಧಾರ) ಕಾಯ್ದೆ 1974ರ ಕಾಯ್ದೆಯ ಸೆಕ್ಷನ್ 5(3)ರಡಿ ವಿಶೇಷ ಅಧಿಕಾರಿಯನ್ನು ನೇಮಕಾತಿ ಮಾಡಿ ವಿಚಾರಣೆಯನ್ನು ಜರುಗಿಸಲು ತೀರ್ಮಾನಿಸಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 364 ಎಎಸ್‌ಡಿ 2011, ಬೆಂಗಳೂರು, ದಿನಾಂಕ : 04–11–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ.ಎಂ.ಆರ್. ಹಿರೇಮಠ್, ಮುಖ್ಯ ಆಡಳಿತಾಧಿಕಾರಿಗಳು, ಕಾಲೇಜು ಶಿಕ್ಷಣ ಇಲಾಖೆ, ಇವರ ಜನ್ಮ ದಿನಾಂಕದ ತಿದ್ದುಪಡಿ ಮಾಡುವ ಕುರಿತಂತೆ ವಿಚಾರಣೆ ನಡೆಸಲು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋನಿರ್ಧಾರ) ಕಾಯ್ದೆ 1974 ರ ಸೆಕ್ಷನ್ 5(3) ರನ್ವಯ ಶ್ರೀ ಮೊಹಮದ್ ಇಸ್ಮಾಯಿಲ್ ವಾದೇಕ್ಷಕರು ಮತ್ತು ಪದನಿಮಿತ್ತ ಉಪ ಕಾರ್ಯದರ್ಶಿ (ಅಭಿಪ್ರಾಯ–1) ಕಾನೂನು ಮತ್ತು ಮಾನವ ಹಕ್ಕುಗಳ ಇಲಾಖೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ಬಾಲಗೋಪಾಲಕೃಷ್ಣ, ಸಹಾಯಕ ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ, (ವ್ಯಾಜ್ಯ–6) ಕಾನೂನು ಮತ್ತು ಮಾನವ ಹಕ್ಕುಗಳ ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎನ್. ಗೋಪಾಲಯ್ಯ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 2681

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಸಮಗ್ರ ಮಕ್ಕಳ ರಕ್ಷಣಾ ಯೋಜನೆಯಡಿ ಕರ್ನಾಟಕ ರಾಜ್ಯ ದತ್ತು ಸಂಪನ್ಮೂಲ ಸಂಸ್ಥೆ (State Adoption Resource Agency, Karnataka) ಯನ್ನು ಸ್ಥಾಪಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಮಮಇ 71 ಮಭಾಬ 2009, ದಿನಾಂಕ: 15-06-2010.
2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮಂತ್ರಾಲಯ, ಭಾರತ ಸರ್ಕಾರ ಇವರ ಪತ್ರ ಸಂಖ್ಯೆ: 14-3/2010-ಸಿಡಬ್ಲೂ-II, ದಿನಾಂಕ: 27-12-2010.
3. ಸರ್ಕಾರದ ಆದೇಶ ಸಂಖ್ಯೆ: ಮಮಇ 81 ಎಸ್‌ಜೆಡಿ 2011, ದಿನಾಂಕ: 19-08-2011.
4. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂಖ್ಯೆ: ಮಮಅ/ಯೋಜನೆ/ಐಸಿಪಿಎಸ್/ 2010-11, ದಿನಾಂಕ: 01-10-2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ 2009-10-ನೇ ಸಾಲಿನಿಂದ ಸಮಗ್ರ ಮಕ್ಕಳ ರಕ್ಷಣಾ ಯೋಜನೆಯನ್ನು ಈಗಾಗಲೇ ಕೇಂದ್ರ ಸರ್ಕಾರದೊಡನೆ ಮಾಡಿಕೊಂಡಿರುವ ದಿನಾಂಕ: 22-03-2010ರ ಒಪ್ಪಂದದನ್ವಯ ಅನುಷ್ಠಾನಗೊಳಿಸಲು ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಗೆ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ದತ್ತು ಸಹಯೋಗ ಸಂಸ್ಥೆ (Adoption Co-ordinating Agency) ಮತ್ತು ರಾಜ್ಯ ದತ್ತು ಸಂಪನ್ಮೂಲ ಸಂಸ್ಥೆ (State Adoption Resource Agency,) ಗಳ ಕಾರ್ಯಗಳು ಒಂದೇ ಆಗಿರುವುದರಿಂದ ದತ್ತು ಸಹಯೋಗ ಸಂಸ್ಥೆಯು ನಿರ್ವಹಿಸುತ್ತಿರುವ ಕಾರ್ಯವನ್ನು (SARA ) ವು ವಹಿಸಿಕೊಂಡು ದಿನಾಂಕ: 31-03-2012 ರಿಂದ ಅನ್ವಯವಾಗುವಂತೆ ದತ್ತು ಸಹಯೋಗ ಸಂಸ್ಥೆಯನ್ನು ಸ್ಥಗಿತಗೊಳಿಸುವಂತೆ ಹಾಗೂ ಈಗಾಗಲೇ ದತ್ತು ಸಹಯೋಗ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳನ್ನು SARA ) ಗೆ ವಿಲೀನಗೊಳಿಸುವ ಕುರಿತು ಆಯಾ ರಾಜ್ಯ ಸರ್ಕಾರಗಳು ನಿರ್ಧಾರ ಕೈಗೊಳ್ಳಬೇಕೆಂದು ಮತ್ತು ದತ್ತು ಸಹಯೋಗ ಸಂಸ್ಥೆಯ ಅಧ್ಯಕ್ಷರನ್ನು ರಾಜ್ಯ ದತ್ತು ಸಂಪನ್ಮೂಲ ಸಂಸ್ಥೆಯಲ್ಲಿ ಸದಸ್ಯರನ್ನಾಗಿ ತೆಗೆದುಕೊಂಡು ರಾಜ್ಯ ದತ್ತು ಸಂಪನ್ಮೂಲ ಸಂಸ್ಥೆಯನ್ನು ರಚಿಸುವಂತೆ ಭಾರತ ಸರ್ಕಾರವು ಸೂಚಿಸಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳ ರಕ್ಷಣಾ ಸೊಸೈಟಿ, ವಿಶೇಷ ದತ್ತು ಸಂಪನ್ಮೂಲ ಸಂಸ್ಥೆ ಹಾಗೂ 30 ಜಿಲ್ಲೆಗಳಿಗೆ ಪ್ರತಿ ಜಿಲ್ಲೆಗೆ ಒಂದು ಜಿಲ್ಲಾ ಮಕ್ಕಳ ರಕ್ಷಣಾ ಘಟಕಗಳಿಗೆ ಅವಶ್ಯವಿರುವ ವಿವಿಧ ವರ್ಗದ ಹುದ್ದೆಗಳನ್ನು ಸೃಜಿಸಿ ಸದರಿ ಹುದ್ದೆಗಳ ನೇಮಕಾತಿ ವಿಧಾನವನ್ನು ಸಹ ನಿರ್ದಿಷ್ಟಪಡಿಸಿ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿ ದತ್ತು ಸಲಹಾ ಸಮಿತಿ ಮತ್ತು ದತ್ತು ಶಿಫಾರಸ್ಸು ಸಮಿತಿಗಳನ್ನು ಈಗಾಗಲೇ ರಚಿಸಲಾಗಿದ್ದು, ರಾಜ್ಯ ದತ್ತು ಸಂಪನ್ಮೂಲ ಸಂಸ್ಥೆಯಲ್ಲಿಯೂ ಸಹ ಸಮಿತಿಯನ್ನು ರಚಿಸಬೇಕಾಗಿದ್ದು ಸಮಿತಿಯಲ್ಲಿ ಬೇಕಾದ ಸದಸ್ಯರ ಬಗ್ಗೆ ಸಮಗ್ರ ಮಕ್ಕಳ ರಕ್ಷಣಾ ಯೋಜನೆ ಮಾರ್ಗಸೂಚಿಯಲ್ಲಿ ವಿವರ ಇಲ್ಲದಿರುವುದರಿಂದ ಈ ಬಗ್ಗೆ ಚರ್ಚಿಸಲಾಗಿತ್ತು. ಪರಿಷ್ಕೃತ ಪ್ರಸ್ತಾವನೆಯನ್ನು ಅಂಗೀಕರಿಸಿ ರಾಜ್ಯ ದತ್ತು ಸಂಪನ್ಮೂಲ ಸಂಸ್ಥೆಯನ್ನು ರಚಿಸಿ ಆದೇಶ ಹೊರಡಿಸುವಂತೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ರವರು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 118 ಮಭಾಬ 2011, ಬೆಂಗಳೂರು, ದಿನಾಂಕ : 08-11 2011**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಸ್ವದೇಶಿ ದತ್ತು ಪ್ರಕ್ರಿಯೆಯನ್ನು ಪ್ರೋತ್ಸಾಹಿಸಲು ಮತ್ತು ವಿದೇಶಿ ದತ್ತು ಪ್ರಕ್ರಿಯೆಯನ್ನು ಕ್ರಮಬದ್ಧಗೊಳಿಸಲು ಹಾಗೂ ಕೇಂದ್ರ ದತ್ತು ಸಂಪನ್ಮೂಲ ಸಂಸ್ಥೆಗೆ ಪೂರಕವಾಗಿ ಕಾರ್ಯನಿರ್ವಹಿಸಲು ಸಮಗ್ರ ಮಕ್ಕಳ ರಕ್ಷಣಾ ಯೋಜನೆ ಮಾರ್ಗಸೂಚಿಗಳಲ್ಲಿ ವಿವರಿಸಿರುವಂತೆ ಕಾರ್ಯನಿರ್ವಹಿಸಲು ರಾಜ್ಯ ದತ್ತು ಸಂಪನ್ಮೂಲ ಸಂಸ್ಥೆ SARA ಯನ್ನು ಈ ಕೆಳಕಂಡ ಸದಸ್ಯರನ್ನೊಳಗೊಂಡಂತೆ ರಚಿಸಿ ಆದೇಶಿಸಿದೆ.

| | | |
|---|---|---|
| 1 | ಯೋಜನಾ ನಿರ್ದೇಶಕರು, ರಾಜ್ಯ ಸಮಗ್ರ ಮಕ್ಕಳ ರಕ್ಷಣಾ ಸೊಸೈಟಿ, ಬೆಂಗಳೂರು | ಅಧ್ಯಕ್ಷರು |
| 2 | ಕಾರ್ಯಕ್ರಮ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ದತ್ತು ಸಂಪನ್ಮೂಲ ಸಂಸ್ಥೆ, ಬೆಂಗಳೂರು. | ಸದಸ್ಯ ಕಾರ್ಯದರ್ಶಿಗಳು |
| 3 | ಅಧ್ಯಕ್ಷರು, ದತ್ತು ಸಹಯೋಗ ಸಂಸ್ಥೆ (Adoption Co-ordinating Agency) ಕರ್ನಾಟಕ, ಬೆಂಗಳೂರು | ಸದಸ್ಯರು |
| 4 | ಅಧ್ಯಕ್ಷರು, ಕರ್ನಾಟಕ ರಾಜ್ಯ ಶಿಶು ಕಲ್ಯಾಣ ಮಂಡಳಿ, ಬೆಂಗಳೂರು (Scrutiny Agency) | ಸದಸ್ಯರು |
| 5 | ವಕೀಲರು (State Child Protection Society) ಅಧ್ಯಕ್ಷರಿಂದ ನಾಮನಿರ್ದೇಶನಗೊಂಡ ವ್ಯಕ್ತಿ | ಸದಸ್ಯರು |
| 6 | ವೈದ್ಯಾಧಿಕಾರಿಗಳು (ಮಕ್ಕಳತಜ್ಞರು) ಅಧ್ಯಕ್ಷರಿಂದ ನಾಮನಿರ್ದೇಶನಗೊಂಡ ವ್ಯಕ್ತಿ | ಸದಸ್ಯರು |
| 7 | ಶಿಕ್ಷಣ ಕ್ಷೇತ್ರದಲ್ಲಿ ಪರಿಣಿತರು, ಅಧ್ಯಕ್ಷರಿಂದ ನಾಮನಿರ್ದೇಶನಗೊಂಡ ವ್ಯಕ್ತಿ | ಸದಸ್ಯರು |

ಸದರಿ ರಾಜ್ಯ ದತ್ತು ಸಂಪನ್ಮೂಲ ಸಂಸ್ಥೆಯು ರಾಜ್ಯ ಮಕ್ಕಳ ರಕ್ಷಣಾ ಸೊಸೈಟಿಯಲ್ಲಿ ದತ್ತು ಪ್ರಕ್ರಿಯೆಗೆ ಸಂಬಂಧಿಸಿದಂತೆ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಮಾಡಲು ತಜ್ಞ ಸಮಿತಿಯಾಗಿ ಕಾರ್ಯನಿರ್ವಹಿಸುತ್ತದೆ. ಸಂಸ್ಥೆಯು ತನ್ನ ಶಿಫಾರಸ್ಸುಗಳನ್ನು ಕೇಂದ್ರ ದತ್ತು ಸಂಪನ್ಮೂಲ ಸಂಸ್ಥೆ ಹಾಗೂ ಸರ್ವೋಚ್ಚ ನ್ಯಾಯಾಲಯವು ಕಾಲ ಕಾಲಕ್ಕೆ ನೀಡುವ ಹಾಗೂ ಸಮಗ್ರ ಮಕ್ಕಳ ರಕ್ಷಣಾ ಯೋಜನೆ ಮಾರ್ಗಸೂಚಿಯಂತೆ ಕಾರ್ಯನಿರ್ವಹಿಸತಕ್ಕದ್ದು.

ಈ ಆದೇಶವನ್ನು ದಿನಾಂಕ: 16–05–2008 ರ ಆದೇಶ ಸಂಖ್ಯೆ: ಎಘ್‌ಡಿ 1 ಟಿಎಫ್‌ಪಿ 2008 ರಲ್ಲಿ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ–1

ಪಿ.ಆರ್. 2682 ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಆರೋಗ್ಯ ಆರ್ಥಿಕ ಮತ್ತು ಲೆಕ್ಕಪತ್ರ ಕೋಶಕ್ಕೆ ಕಿರಿಯ ಸಮಾಲೋಚಕರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಆಕುಕ (ಯೋ) 45 ವಿಬ್ಯಾನೆ 2009, ದಿ: 21–07–2009.

**2.** ಸಮ ಸಂಖ್ಯೆಯ ಸರ್ಕಾರಿ ಆದೇಶದ ದಿ: 28–10–2011

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯದಲ್ಲಿ 3 ವಿವಿಧ ಕೋಶಗಳನ್ನು ಅಂದರೆ, 1) ಆರೋಗ್ಯ ಆರ್ಥಿಕ ಕೋಶ, 2) ಆರೋಗ್ಯ ಲೆಕ್ಕಪತ್ರ ಕೋಶ ಮತ್ತು 3) ಸಾರ್ವಜನಿಕ ಖಾಸಗಿ ಸಹಭಾಗಿತ್ವ ಕೋಶಗಳನ್ನು ಸೃಜಿಸಲು ಮಂಜೂರಾತಿ ನೀಡಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದನ್ವಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯದಲ್ಲಿ ಸೃಜಿಸಲಾಗಿದ್ದ 1) ಆರೋಗ್ಯ ಆರ್ಥಿಕ ಕೋಶ, 2) ಆರೋಗ್ಯ ಲೆಕ್ಕಪತ್ರ ಕೋಶ ಇವೆರಡು ಕೋಶಗಳನ್ನು ವಿಲೀನಗೊಳಿಸಿ ಆರೋಗ್ಯ ಆರ್ಥಿಕ ಮತ್ತು ಲೆಕ್ಕಪತ್ರ ಕೋಶವೆಂದು ಒಂದು ಕೋಶವನ್ನಾಗಿ ಮಾರ್ಪಾಡಿಸುವ ಬಗ್ಗೆ ಮಂಜೂರಾತಿ ನೀಡಿದೆ.

ಈ ಸಂಬಂಧ ಆರೋಗ್ಯ ಆರ್ಥಿಕ ಮತ್ತು ಲೆಕ್ಕಪತ್ರ ಕೋಶದಲ್ಲಿ ಕಿರಿಯ ಸಮಾಲೋಚಕರಾಗಿ ಕಾರ್ಯನಿರ್ವಹಿಸುವ ಬಗ್ಗೆ ಆಸಕ್ತಿ ವ್ಯಕ್ತಪಡಿಸುವ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸುವ ಸಲುವಾಗಿ Mayasol Business Solution ವತಿಯಿಂದ ವೆಬ್‌ಸೈಟ್ ಮೂಲಕ ಕೆಹೆಚ್‌ಎಸ್‌ಡಿಆರ್‌ಪಿ ಮತ್ತು ಆಕುಕ ನಿರ್ದೇಶನಾಲಯದಲ್ಲಿ ಅಧಿಸೂಚನೆಯನ್ನು ಪ್ರಕಟಿಸಿದ್ದು, ಸದರಿ ಪ್ರಕಟಣೆಯ ಮೇರೆಗೆ 30 ಪ್ರಸ್ತಾವನೆಗಳು ಸ್ವೀಕೃತವಾಗಿದೆ. ಸದರಿ ಪ್ರಸ್ತಾವನೆಗಳನ್ನು ಆಯ್ಕೆ ಸಮಿತಿಯು ಪರಿಶೀಲಿಸಿ ಅರ್ಹತೆಯುಳ್ಳ 5 ಅಭ್ಯರ್ಥಿಗಳ ಶಾರ್ಟ್‌ಲಿಸ್ಟ್ ತಯಾರಿಸಿದ್ದು, ಸದರಿ ಶಾರ್ಟ್‌ಲಿಸ್ಟ್‌ನ ಅಭ್ಯರ್ಥಿಗಳಿಗೆ ದಿನಾಂಕ 07–09–2011 ರಂದು ಯೋಜನಾ ಪ್ರಧಾನ ಕಚೇರಿಯಲ್ಲಿ ಸಂದರ್ಶನವನ್ನು ನಡೆಸಲಾಯಿತು. ವಿದ್ಯಾರ್ಹತೆ ಮತ್ತು ಅನುಭವದ ಆಧಾರದ ಮೇಲೆ 2 ಅಭ್ಯರ್ಥಿಗಳನ್ನು ಮಾಸಿಕ ಸಂಭಾವನೆ ರೂ. 30,000–00ಗಳನ್ನು ನಿಗಧಿಪಡಿಸಿ ಆಯ್ಕೆ ಮಾಡಲಾಗಿದೆ.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚಿಎಫ್‌ಡಬ್ಲೂ/ಕೆಹೆಚ್‌ಎಸ್‌ಡಿಆರ್‌ಪಿ/ಒಡಿ/ಹೆಚ್‌ಎಫ್ ಸೆಲ್ /32 /08–09**

**ಬೆಂಗಳೂರು, ದಿನಾಂಕ: 29–10–2011**

ಮೇಲೆ ವಿವರಿಸಿರುವ ಪ್ರಸ್ತಾವನೆಗಳ ಹಿನ್ನೆಲೆಯಲ್ಲಿ, ಸರ್ಕಾರವು ಕೆಹೆಚ್‌ಎಸ್‌ಡಿಆರ್‌ಪಿ ಯೋಜನೆಯಡಿ ಆರೋಗ್ಯ ಆರ್ಥಿಕ ಮತ್ತು ಲೆಕ್ಕ ಪತ್ರ ಕೋಶದಲ್ಲಿ ಕಿರಿಯ ಸಮಾಲೋಚಕರಾಗಿ ಕಾರ್ಯನಿರ್ವಹಿಸಲು ಕೆಳಕಂಡ ಅಭ್ಯರ್ಥಿಗಳನ್ನು ಗುತ್ತಿಗೆ ಆಧಾರದ ಮೇಲೆ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ದಿನಾಂಕ: 26–09–2011 ರಿಂದ 31–03–2012 ರವರೆಗೆ ಕಾರ್ಯನಿರ್ವಹಿಸಲು ಮಂಜೂರಾತಿ ನೀಡಿದೆ.

| ಕ್ರಮ ಸಂಖ್ಯೆ | ಹೆಸರು | ಸಂಭಾವನೆ (ರೂ.ಗಳಲ್ಲಿ) |
|---|---|---|
| 1 | ಶ್ರೀಮತಿ ಸಿಂದುಶ್ರೀ ಹೆಚ್. | 30,000–00 |
| 2 | ಶೀ ಅಫಕ್ ಅಹಮ್ಮದ್ | 30,000–00 |

ಸದರಿಯವರು ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯೊಂದಿಗೆ ಗುತ್ತಿಗೆ ನೇಮಕದ ಷರತ್ತು ಮತ್ತು ನಿಬಂಧನೆಗಳನ್ನೊಳಗೊಂಡ (ToR) ಕರಾರು ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು.

ಸದರಿ ವೆಚ್ಚವನ್ನು ಲೆಕ್ಕಶೀರ್ಷಿಕೆ "2210–06–800–0–81 (ಯೋ) (0 51) ಸಾಮಾನ್ಯ ವೆಚ್ಚಗಳು" ಅಡಿಯಲ್ಲಿ 2011–12ನೇ ಸಾಲಿನಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಶಶಿಧರ್**

ಸರ್ಕಾರದ ಉಪ ಕಾರ್ಯದರ್ಶಿ

ಕೆಹೆಚ್‌ಎಸ್‌ಡಿಆರ್‌ಪಿ

ಪಿ.ಆರ್. 2683 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಧಾರ್ಮಿಕ ದತ್ತಿ ಇಲಾಖೆಯ ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪಯೋಜನೆಯ ಕಾರ್ಯಯೋಜನೆ ಜಾರಿಗೊಳಿಸುವ ಕುರಿತು ಮಾರ್ಗಸೂಚಿ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 32 ಮುಇವಿ 2011 ದಿನಾಂಕ: 04–07–2011.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 32 ಮುಇವಿ 2011 ದಿನಾಂಕ: 04–07–2011.
3. ಆಯುಕ್ತರು, ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಆರಾಧನಾ/ಸಿಆರ್/26/2010–11, ದಿನಾಂಕ: 19–07–2011.

**ಪ್ರಸ್ತಾವನೆ :**

ಸರ್ಕಾರವು 2011–12ನೇ ಸಾಲಿನಲ್ಲಿ ಮುಜರಾಯಿ ಇಲಾಖೆಯಲ್ಲಿ " ವಿಶೇಷ ಘಟಕ ಯೋಜನೆ" ಹಾಗೂ "ಗಿರಿಜನ ಉಪಯೋಜನೆ" ಗಳನ್ನು ಜಾರಿಗೊಳಿಸಿದೆ. ಇಲಾಖೆಗೆ ಇದೊಂದು ಹೊಸ ಯೋಜನೆಯಾಗಿವೆ.

ಈ ಯೋಜನೆಗಳ ಅನುಷ್ಠಾನಕ್ಕಾಗಿ ಇಲಾಖೆಗೆ ಲೆಕ್ಕಶೀರ್ಷಿಕೆ "2250–00–800–2–16– ವಿಶೇಷ ಘಟಕ ಯೋಜನೆ–422–(ಯೋಜನೆ)" ಅಡಿಯಲ್ಲಿ ರೂ. 838.40 ಲಕ್ಷಗಳನ್ನು ಹಾಗೂ " 2250–00–800–2–16– ಗಿರಿಜನ ಉಪಯೋಜನೆ–423 (ಯೋಜನೆ)" ಅಡಿಯಲ್ಲಿ ರೂ. 324.40 ಲಕ್ಷಗಳನ್ನು ಒದಗಿಸಲಾಗಿರುತ್ತದೆ.

ಹೀಗೆ ಒದಗಿಸಲಾದ ಅನುದಾನದಲ್ಲಿ ಪ್ರಸ್ತಾಪಿತ ಯೋಜನೆಗಳನ್ನು ಜಾರಿಗೊಳಿಸಲು ಅನುವಾಗುವಂತೆ ಮೇಲೆ ಓದಲಾದ(1) ಮತ್ತು (2)ರ ಸರ್ಕಾರಿ ಆದೇಶಗಳಲ್ಲಿ ಕ್ರಮವಾಗಿ ರೂ. 279.00 ಲಕ್ಷಗಳನ್ನು (SCSP) ಹಾಗೂ ರೂ. 108.20 ಲಕ್ಷಗಳನ್ನು (TSP) ಧಾರ್ಮಿಕ ದತ್ತಿ ಆಯುಕ್ತರವರಿಗೆ ಮಂಜೂರು ಮಾಡಿದೆ. ಅಲ್ಲದೆ, ಮಂಜೂರು ಮಾಡಲಾದ ಅನುದಾನವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲು ಸಹ ಧಾರ್ಮಿಕ ದತ್ತಿ ಆಯುಕ್ತರವರಿಗೆ ಆದೇಶವನ್ನು ನೀಡಲಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆಯ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿ ಕಾರ್ಯಯೋಜನೆಗಳನ್ನು ಜಾರಿಗೊಳಿಸುವ ಬಗ್ಗೆ ಕರಡು ಮಾರ್ಗಸೂಚಿಯನ್ನು ತಯಾರಿಸಿ, ಸದರಿ ಮಾರ್ಗಸೂಚಿಗೆ ಅನುಮೋದನೆ ನೀಡಬೇಕೆಂದು ಕೋರಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರವರ ಕೋರಿಕೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 189 ಮುಅಬಿ 2011, ದಿನಾಂಕ: 19–09–2011ರ**

2011–12ನೇ ಸಾಲಿನಲ್ಲಿ ಮುಜರಾಯಿ ಇಲಾಖೆಯ 'ವಿಶೇಷ ಘಟಕ ಯೋಜನೆ" ಹಾಗೂ " ಗಿರಿಜನ ಉಪಯೋಜನೆ" ಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಅನುವಾಗುವಂತೆ ಈ ಆದೇಶದ ಅನುಬಂಧದಲ್ಲಿರುವ ಮಾರ್ಗಸೂಚಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಅನುಮೋದನೆ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಕೆ. ಉಮಾಪತಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)

**ಸರ್ಕಾರದ ಆದೇಶ ಸಂಖ್ಯೆ: ಕಂಇ 189 ಮುಅಬಿ 2011, ಬೆಂಗಳೂರು, ದಿನಾಂಕ: 19–09–2011ರ**

**ಅನುಬಂಧ**

ಧಾರ್ಮಿಕ ದತ್ತಿ ಇಲಾಖೆಯಡಿ ಜಾರಿಗೆ ತರಲು ಉದ್ದೇಶಿಸಲಾದ ವಿಶೇಷ ಘಟಕ ಯೋಜನೆ (ಪರಿಶಿಷ್ಠ ಜಾತಿ) ಮತ್ತು ಗಿರಿಜನ (ಪರಿಶಿಷ್ಠ ಪಂಗಡ) ಉಪಯೋಜನೆಯಡಿ ಒದಗಿಸಲಾದ ಅನುದಾನವನ್ನು ಮಂಜೂರು ಮಾಡಲು ಪ್ರತಿಯೊಂದು ಜಿಲ್ಲೆಯಲ್ಲಿ ಅಧಿಕಾರಿಗಳನ್ನೊಳಗೊಂಡ ಒಂದು ಉಪಯೋಜನಾ ಸಮಿತಿಯನ್ನು ಕೆಳಕಂಡಂತೆ ರಚಿಸಲಾಗಿದೆ:–

| | | |
|---|---|---|
| 1 | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2 | ಜಿಲ್ಲಾ ಹಿಂದೂ ಧಾರ್ಮಿಕ ಧರ್ಮಾದಾಯ ದತ್ತಿಗಳ ಸಹಾಯಕ ಆಯುಕ್ತರು ಅಥವಾ ಜಿಲ್ಲಾ ಕೇಂದ್ರ ಸ್ಥಾನದ ಉಪವಿಭಾಗದ ಸಹಾಯಕ ಆಯುಕ್ತರು | ಸದಸ್ಯರು |
| 3 | ಎಲ್ಲಾ ತಾಲ್ಲೂಕು ತಹಸೀಲ್ದಾರರು | ಸದಸ್ಯರು |
| 4 | ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ | ಸದಸ್ಯರು |
| 5 | ಜಿಲ್ಲಾ ಪಂಚಾಯತ್ ಕಾರ್ಯಪಾಲಕ ಅಭಿಯಂತರರು | ಸದಸ್ಯರು |
| 6 | ಜಿಲ್ಲಾಧಿಕಾರಿಗಳ ಕಛೇರಿಯ ಧಾರ್ಮಿಕ ದತ್ತಿ ತಹಸೀಲ್ದಾರರು/ ಧಾರ್ಮಿಕ ದತ್ತಿ ಸಹಾಯಕರು | ಕಾರ್ಯದರ್ಶಿಗಳು |

2. ಸದರಿ ಎರಡು ಉಪಯೋಜನೆಗಳಡಿ ಸರ್ಕಾರವು ಒದಗಿಸಿದ ಅನುದಾನವನ್ನು ಪರಿಶಿಷ್ಟ ಜಾತಿ ಮತ್ತು ಗಿರಿಜನ /ಪರಿಶಿಷ್ಠ ಪಂಗಡದವರು ವಾಸಿಸುವ ಸ್ಥಳಗಳಲ್ಲಿ ಅಥವಾ ಸದರಿ ಸಮುದಾಯದವರು ವಾಸಿಸುವ ಸ್ಥಳಕ್ಕೆ ಸಮೀಪ ನಿವೇಶನಗಳನ್ನು ಗುರುತಿಸಿ, ಅಲ್ಲಿ ಅವರಿಗಾಗಿ ದೇವಾಲಯ, ಪ್ರಾರ್ಥನಾ ಮಂದಿರ ಅಥವಾ ಕಲ್ಯಾಣ ಮಂಟಪ/ಸಮುದಾಯ ಭವನವನ್ನು ನಿರ್ಮಿಸಲು ಅಥವಾ ಅವುಗಳ ಜೀರ್ಣೋದ್ಧಾರಕ್ಕಾಗಿ ಬಳಸುವುದು ಈ ಕಾಮಗಾರಿಗೆ ಬಿಡುಗಡೆ ಮಾಡಬಹುದಾದ ಅನುದಾನದ ಗರಿಷ್ಠ ಮಿತಿಯು ಕೆಳಕಂಡಂತಿದೆ.

| | | |
|---|---|---|
| 1 | ನವ ದೇವಾಲಯ/ಪ್ರಾರ್ಥನಾ ಮಂದಿರದ ನಿರ್ಮಾಣ ಅಥವಾ ಜೀರ್ಣೋದ್ಧಾರ | ರೂ. 10.00 ಲಕ್ಷ |
| 2 | ಕಲ್ಯಾಣ ಮಂಟಪ/ಸಮುದಾಯ ಭವನದ ನಿರ್ಮಾಣ | ರೂ. 15.00 ಲಕ್ಷ |

3. ನವ ದೇವಾಲಯ, ಪ್ರಾರ್ಥನಾ ಮಂದಿರ ಅಥವಾ ಕಲ್ಯಾಣ ಮಂಟಪ/ಸಮುದಾಯ ಭವನ ನಿರ್ಮಾಣಕ್ಕಾಗಿ ಸ್ಥಳಾವಕಾಶವು ಪರಿಶಿಷ್ಠ ಜಾತಿ/ ಪರಿಶಿಷ್ಠ ಪಂಗಡ/ಗಿರಿಜನರು ವಾಸಿಸುವ ಸ್ಥಳಗಳಲ್ಲಿ ಲಭ್ಯವಿಲ್ಲದಿದ್ದಲ್ಲಿ, ಇದಕ್ಕೆ ಬೇಕಾಗುವ ಕನಿಷ್ಠ ನಿವೇಶವನ್ನು ಕಂದಾಯ ಇಲಾಖಾಧಿಕಾರಿಗಳು ಪ್ರತ್ಯೇಕವಾಗಿ ಗುರುತಿಸಬೇಕು. ಸೂಕ್ತ ಜಾಗ/ನಿವೇಶನ ಲಭ್ಯವಿಲ್ಲದಿದ್ದಲ್ಲಿ ಸಮೀಪದಲ್ಲಿರುವ ಸರ್ಕಾರಿ ಜಮೀನನ್ನು ಗುರುತಿಸಿ, ದೇವಾಲಯ,/ ಪ್ರಾರ್ಥನಾ ಮಂದಿರ/ ಕಲ್ಯಾಣ ಮಂಟಪದ ನಿರ್ಮಾಣಕ್ಕಾಗಿ ಮೀಸಲಿಡತಕ್ಕದ್ದು. ನಿವೇಶನದ ಖಾತೆಯನ್ನು ದೇವರ ಹೆಸರಿನಲ್ಲಿ ಆಥವಾ ಸಮುದಾಯದ ಹೆಸರಲ್ಲಿ ಬದಲಾವಣೆ ಮಾಡಬೇಕು.

4. ಈ ಉಪಯೋಜನೆಯಡಿ ಅನುದಾನ ಬಿಡುಗಡೆ ಮಾಡುವ ಮತ್ತು ಕಾಮಗಾರಿಗಳನ್ನು ಕೈಗೊಳ್ಳುವ ಬಗ್ಗೆ:– ಪ್ರತಿವರ್ಷ ಈ ಉಪಯೋಜನೆಗಳಡಿ ಸರ್ಕಾರವು ಒದಗಿಸುವ ಅನುದಾನವನ್ನು ಧಾರ್ಮಿಕ ದತ್ತಿ ಆಯುಕ್ತರು ನಗದೀಕರಿಸಿ, ಅವರ ಅಭಿರಕ್ಷೆಯಲ್ಲಿರಿಸಿಕೊಳ್ಳಬೇಕು.

ಪ್ರತಿಯೊಂದು ತಾಲ್ಲೂಕಿನ ತಹಸೀಲ್ದಾರರು ಅವರ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡ/ಗಿರಿಜನ ವಾಸಿಸುವ ಸ್ಥಳಗಳನ್ನು ಗುರುತಿಸಿ, ಅವರ ವಾಸಸ್ಥಳಕ್ಕೆ ಸಮೀಪ ಲಭ್ಯವಿರುವ ಜಮೀನು / ನಿವೇಶನ ಅಥವಾ ಸರ್ಕಾರಿ ಜಮೀನನ್ನು ಗುರುತಿಸಿ, ಸದರಿ ಜಮೀನಿನಲ್ಲಿ/ನಿವೇಶನದಲ್ಲಿ ಮೇಲ್ಕಂಡ ಸಮುದಾಯದವರಿಗಾಗಿ ನಿರ್ಮಿಸಬಹುದಾದ ದೇವಾಲಯ/ಪ್ರಾರ್ಥನಾ ಮಂದಿರ /ಸಮುದಾಯ ಭವನ / ಕಲ್ಯಾಣ ಮಂಟಪದ ನಿರ್ಮಾಣಕ್ಕಾಗಿ ಕಾಮಗಾರಿಯ ಅಂದಾಜು ಪಟ್ಟಿಯನ್ನು ನಕ್ಷೆಯೊಂದಿಗೆ ತಾಲ್ಲೂಕು ಪಂಚಾಯತ್ ಕಾರ್ಯನಿರ್ವಾಹಕ ಅಭಿಯಂತರರಿಂದ ತಯಾರಿಸಿ ಪ್ರಸ್ತಾವವನ್ನು ಜಿಲ್ಲಾಧಿಕಾರಿಗಳಿಗೆ ಸಲ್ಲಿಸುವುದು. ಈ ಕಾಮಗಾರಿಗಳ ಪ್ರಸ್ತಾವಗಳನ್ನು ಆಯಾಯ ಜಿಲ್ಲೆಯ ಜಿಲ್ಲಾಧಿಕಾರಿಗಳ ಧಾರ್ಮಿಕ ದತ್ತಿ ತಹಸೀಲ್ದಾರರು/ ದತ್ತಿ ಸಹಾಯಕರು ಪರಿಶೀಲನೆ ಮಾಡಿ ತಾಲ್ಲೂಕುಗಳಿಂದ ಪ್ರಸ್ತಾವವನ್ನು ತರಿಸಿ ಜಿಲ್ಲಾಧಿಕಾರಿಗಳಿಗೆ ಸಲ್ಲಿಸತಕ್ಕದ್ದು. ಪ್ರತಿ ತಿಂಗಳು ಉಪಯೋಜನಾ ಸಮಿತಿಯ ಸಭೆಯನ್ನು ನಡೆಸುವ ಹಾಗೂ ಎಲ್ಲಾ ತಾಲ್ಲೂಕುಗಳಿಂದ ಬಂದಿರುವ ಪ್ರಸ್ತಾವಗಳನ್ನು ಪರಿಶೀಲಿಸಿ ಸದರಿ ಸಭೆಯಲ್ಲಿರಿಸುವುದು ಇವರ ಜವಾಬ್ದಾರಿ ಆಗಿರುತ್ತದೆ. ಅವರು ತಹಸೀಲ್ದಾರರಿಂದ ಬಂದ ಎಲ್ಲಾ ಪ್ರಸ್ತಾವಗಳನ್ನು ಜಿಲ್ಲಾಧಿಕಾರಿಗಳ ಜಿಲ್ಲಾ ಉಪಯೋಜನಾ ಸಮಿತಿಯ ಸಭೆಯಲ್ಲಿ ಮಂಡಿಸಿ, ಸದರಿ ಸಭೆಯ ತೀರ್ಮಾನದಂತೆ ಪ್ರಸ್ತಾವಕ್ಕೆ ತಾಂತ್ರಿಕ ಹಾಗೂ ಆಡಳಿತಾತ್ಮಕ ಅನುಮೋದನೆ ನೀಡಿದ ನಂತರ ಕ್ರೂಢೀಕೃತ ಪ್ರಸ್ತಾವವನ್ನು ಧಾರ್ಮಿಕ ದತ್ತಿ ಆಯುಕ್ತರಿಗೆ ಅನುದಾನವನ್ನು ಬಿಡುಗಡೆ ಮಾಡಲು ಸಲ್ಲಿಸುವುದು. ಈ ರೀತಿ ಎಲ್ಲಾ ಜಿಲ್ಲೆಗಳಿಂದ ಬರುವ ಪ್ರಸ್ತಾವಗಳನ್ನು ಪ್ರಥಮ ಆದ್ಯತೆ ಮೇರೆಗೆ ಪರಿಶೀಲಿಸಿ, ಧಾರ್ಮಿಕ ದತ್ತಿ ಆಯುಕ್ತರು ಅನುದಾನದ ಲಭ್ಯತೆಗೆ ಅನುಗುಣವಾಗಿ ಕಂಡಿಕೆ (2)ರಲ್ಲಿ ನಿಗಧಿಪಡಿಸಿದ ಗರಿಷ್ಠ ಮಿತಿಯಿಂದ ಆಯಾಯ ಜಿಲ್ಲೆಯಿಂದ ಬಂದಿರುವ ಪ್ರಸ್ತಾವದಂತೆ ಕಾಮಗಾರಿಗಳಿಗೆ ಬೇಕಾಗುವ ಒಟ್ಟು ಅನುದಾನವನ್ನು ಜಿಲ್ಲಾಧಿಕಾರಿಗಳಿಗೆ ಬೇಡಿಕೆ ಹುಂಡಿ ಮೂಲಕ ಕಳುಹಿಸಿಕೊಡುವುದು.

5. ಧಾರ್ಮಿಕ ದತ್ತಿ ಆಯುಕ್ತರಿಂದ ಬಂದಿರುವ ಅನುದಾನವನ್ನು ಆಯಾ ಜಿಲ್ಲಾಧಿಕಾರಿಗಳು ಕಾಮಗಾರಿಗೆ ಆಡಳಿತಾತ್ಮಕ ಮಂಜೂರಾತಿ ಆದೇಶದೊಂದಿಗೆ ತಹಸೀಲ್ದಾರರಿಗೆ ಕಳುಹಿಸಿಕೊಡುವುದು. ಹೀಗೆ ಜಿಲ್ಲಾಧಿಕಾರಿಗಳಿಂದ ಬಂದಿರುವ ಅನುದಾನವನ್ನು ತಹಸೀಲ್ದಾರರು ಅವರ ಅಭಿರಕ್ಷೆಯಲ್ಲಿ ಇರಿಸಿಕೊಂಡು ಕಾಮಗಾರಿಯನ್ನು ಸ್ಥಳೀಯ ಸಮಿತಿ/ ಸಂಸ್ಥೆಗಳ ಮೂಲಕ ಕೈಗೊಳ್ಳಬಹುದು. ಒಂದು ವೇಳೆ ಸ್ಥಳೀಯ ಸಮಿತಿಗಳು ಅಥವಾ ಸಂಸ್ಥೆಗಳು ಕಾಮಗಾರಿಗಳನ್ನು ಕೈಗೊಳ್ಳಲು ಮುಂದೆ ಬಾರದ ಸಂದರ್ಭದಲ್ಲಿ, ಕಾಮಗಾರಿಯನ್ನು ಜಿಲ್ಲಾಪಂಚಾಯತ್ ಅಥವಾ ತಾಲ್ಲೂಕು ಪಂಚಾಯತ್ ಇಂಜಿನಿಯರ್‌ಗಳ ಮೂಲಕ ಕೈಗೊಳ್ಳಬೇಕು. ಹೀಗೆ ಕೈಗೊಳ್ಳಲಾದ ಕಾಮಗಾರಿಗಳ ಪ್ರಗತಿಯನ್ನು ಪರಿಶೀಲಿಸಿಕೊಂಡು ತಹಸೀಲ್ದಾರರು ತಾಲ್ಲೂಕು ಪಂಚಾಯತ್/ ಜಿಲ್ಲಾ ಪಂಚಾಯತ್ ಇಂಜಿನಿಯರುಗಳಿಂದ ಕಾಮಗಾರಿಯ ಬಿಲ್‌ನ್ನು ದೃಢೀಕರಿಸಿಕೊಂಡು, ಬಿಲ್ ಮೊತ್ತವನ್ನು ಬಿಡುಗಡೆ ಮಾಡಬೇಕು. ಕಾಮಗಾರಿಯನ್ನು ತೃಪ್ತಿಕರವಾಗಿ ಪೂರೈಸಿರುವ ಬಗ್ಗೆ ಹಾಗೂ ಕಾಮಗಾರಿಯ ಗುಣಮಟ್ಟದ ಬಗ್ಗೆ ತಹಸೀಲ್ದಾರರು ಖಾತ್ರಿಪಡಿಸಿಕೊಂಡು ಕಾಮಗಾರಿಯ ಅಂತಿಮ ಬಿಲ್‌ನ್ನು ಪಾವತಿಸಿದ ನಂತರ ಅನುದಾನದ ಬಳಕೆ ಪತ್ರವನ್ನು ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆಯಾದ ಒಂದು ವರ್ಷದೊಳಗೆ ತಹಸೀಲ್ದಾರರು ಸಲ್ಲಿಸುವುದು. ಈ ರೀತಿ ತಹಸೀಲ್ದಾರರಿಂದ ಬಂದಿರುವ ಬಳಕೆ ಪತ್ರವನ್ನು ಜಿಲ್ಲಾಧಿಕಾರಿಗಳು ಪರಿಶೀಲಿಸಿ ಮೇಲು ಸಹಿಯೊಂದಿಗೆ ಧಾರ್ಮಿಕ ದತ್ತಿ ಆಯುಕ್ತರಿಗೆ ಕಳುಹಿಸಿಕೊಡುವುದು. ಧಾರ್ಮಿಕ ದತ್ತಿ ಆಯುಕ್ತರು ಈ ಬಳಕೆ ಪತ್ರವನ್ನು ತಮ್ಮ ಮೇಲುಸಹಿಯೊಂದಿಗೆ ಮಹಾಲೇಖಪಾಲಕರಿಗೆ ರವಾನಿಸುವುದು.

6. ಈ ಉಪಯೋಜನೆಯಡಿ ಅನುದಾನ ಮಂಜೂರು ಮಾಡುವಾಗ ಎಲ್ಲಾ ತಾಲ್ಲೂಕುಗಳಲ್ಲಿ ಕಂಡುಬರುವ ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡ/ ಗಿರಿಜನರು ವಾಸಿಸುವ ಸ್ಥಳಗಳನ್ನು ಆದ್ಯತೆ ಮೇರೆಗೆ ಗುರುತಿಸಿ ಅನುದಾನವನ್ನು ಬಿಡುಗಡೆ ಮಾಡುವಾಗ ಸಮತೋಲನವನ್ನು ಕಾಪಾಡಿಕೊಳ್ಳಬೇಕು ಹಾಗೂ ಸದರಿ ಜನಾಂಗದವರು ವಾಸಿಸುವ ಎಲ್ಲಾ ಪ್ರದೇಶಕ್ಕೂ ಈ ಉಪಯೋಜನೆಯ ಸೌಲಭ್ಯವು ದೊರಕುವಂತೆ ನೋಡಿಕೊಳ್ಳಬೇಕು. ತಾಲ್ಲೂಕು ಮಟ್ಟದಲ್ಲಿ ಈ ಯೋಜನೆಯನ್ನು ತಯಾರಿಸುವಾಗ ಮತ್ತು ಕಾರ್ಯಗತಗೊಳಿಸುವಾಗ ತಾಲ್ಲೂಕುಗಳ ಹೋಬಳಿ ಉಪ ತಹಸೀಲ್ದಾರರನ್ನು ಭಾಗಿಗಳನ್ನಾಗಿ ಮಾಡಿ ಅವರ ಮೂಲಕ ಅಂದಾಜು ಪಟ್ಟಿಯನ್ನು ಪಡೆದು ಪ್ರಸ್ತಾವವನ್ನು ಸಲ್ಲಿಸುವುದು ಹಾಗೂ ಕಾಮಗಾರಿಯನ್ನು ಉಪತಹಸೀಲ್ದಾರರು ಮತ್ತು ತಾಲ್ಲೂಕು ಪಂಚಾಯತ್ ಅಭಿಯಂತರರ ಉಸ್ತುವಾರಿಯಲ್ಲಿ ಕೈಗೊಳ್ಳುವುದು.

7. ಈ ಉಪಯೋಜನೆಯ ಅನುಷ್ಠಾನಾಧಿಕಾರಿಯಾಗಿ ಪ್ರತಿಯೊಂದು ಜಿಲ್ಲೆಯಲ್ಲಿ ಸಹಾಯಕ ಆಯುಕ್ತರು, ಹಿಂದೂ ಧಾರ್ಮಿಕ ದತ್ತಿ ಇಲಾಖೆ, ಇವರನ್ನು ಜಿಲ್ಲಾಧಿಕಾರಿಗಳು ನೋಡಲ್ ಅಧಿಕಾರಿಯನ್ನಾಗಿ ನೇಮಿಸುವುದು. ಇಲಾಖಾ ಸಹಾಯಕ ಆಯುಕ್ತರ ಹುದ್ದೆ ಇಲ್ಲದಿರುವ ಜಿಲ್ಲೆಗಳಲ್ಲಿ ಜಿಲ್ಲಾ ಕೇಂದ್ರಸ್ಥಾನದ ಉಪ ವಿಭಾಗದ ಸಹಾಯಕ ಕಮೀಷನರ್ ಅವರನ್ನು ನೋಡಲ್ ಅಧಿಕಾರಿಯನ್ನಾಗಿ ನೇಮಿಸುವುದು. ಈ ಯೋಜನೆಯ ಅನುಷ್ಠಾನದ ಪೂರ್ಣ ಜವಾಬ್ದಾರಿ ಇವರದ್ದಾಗಿರುತ್ತದೆ. ಹಾಗೂ ತಹಸೀಲ್ದಾರರಿಂದ ತರಿಸಿ ಜಿಲ್ಲಾಧಿಕಾರಿಗಳಿಗೆ ಸಲ್ಲಿಸುವ ಹಾಗೂ ಮಂಜೂರಾದ ಕಾಮಗಾರಿಗಳು ಅನುಷ್ಠಾನಗೊಳಿಸುವಂತೆ ನೋಡಿಕೊಳ್ಳುವುದು ಇವರ ಜವಾಬ್ದಾರಿಯಾಗಿರುತ್ತದೆ.

8. ಈ ಯೋಜನೆಯಡಿ ಬಿಡುಗಡೆಯಾದ ಅನುದಾನವು ಮೇಲ್ಕಂಡ ಉದ್ದೇಶಗಳಿಗೆ ಹೊರತುಪಡಿಸಿ ಬೇರೆ ಉದ್ದೇಶಗಳಿಗೆ ಬಳಸುವಂತಿಲ್ಲ ಹಾಗೂ ಬೇರೆ ಉದ್ದೇಶಗಳಿಗೆ ಹಣವನ್ನು ಬಿಡುಗಡೆ ಮಾಡಿದ್ದಲ್ಲಿ ಹಣವನ್ನು ಬಿಡುಗಡೆ ಮಾಡಿದ ಅಧಿಕಾರಿಯನ್ನು ನೇರವಾಗಿ ಹೊಣೆಗಾರರನ್ನಾಗಿ ಮಾಡಲಾಗುವುದು. ಈ ಉದ್ದೇಶಕ್ಕೆ ಬಿಡುಗಡೆಯಾದ ಅನುದಾನವು ಬಿಡುಗಡೆಯಾದ ದಿನಾಂಕದಿಂದ ಒಂದು ವರ್ಷದೊಳಗೆ ಬಳಕೆಯಾಗಿ ಹಣ ಖರ್ಚಾಗುವಂತೆ ನೋಡಿಕೊಳ್ಳುವುದು ಜಿಲ್ಲಾ ಉಪಸಮಿತಿಯ ಹಾಗೂ ಸಂಬಂಧಿಸಿದ ತಹಿಸೀಲ್ದಾರರ ಜವಾಬ್ದಾರಿಯಾಗಿರುತ್ತದೆ.

**ಕೆ.ಉಮಾಪತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 2684

## ಕಾರ್ಮಿಕ ಸಚಿವಾಲಯ

**ವಿಷಯ :** ಬೀಡಿ ತಯಾರಿಕೆ ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಟ ವೇತನವನ್ನು ಪರಿಷ್ಕರಿಸಲು ಕನಿಷ್ಟ ವೇತನ ಕಾಯ್ದೆ 1948ರ ಕಲಂ 5(1)(ಎ) ಅಡಿ ಉಪ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ : ಕಾಇ 113 ಎಲ್ಎಂಡಬ್ಲ್ಯೂ 2009, ದಿನಾಂಕ 4–3–2010.

2. ಕಾರ್ಮಿಕ ಆಯುಕ್ತರ ಪತ್ರ ಸಂಖ್ಯೆ : ಕವೇಕಾ–2/ಇತರೆ/ಸಿಆರ್–21/2010–11, ದಿನಾಂಕ 10–1–2011.

**ಪ್ರಸ್ತಾವನೆ :**

ಕೇಂದ್ರ ಸರ್ಕಾರವು ರಾಷ್ಟ್ರೀಯ ಮಟ್ಟದಲ್ಲಿ ಕನಿಷ್ಠ ವೇತನ ದರವನ್ನು ದಿನಾಂಕ 1–11–2009 ರಿಂದ ಜಾರಿಗೆ ಬರುವಂತೆ ರೂ. 100/–ಗಳನ್ನು ನಿಗದಿ ಮಾಡಿದ್ದರ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯಾದ್ಯಂತ ಬೀಡಿ ತಯಾರಿಕೆ ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಮೇಲೆ ಓದಲಾದ 1ರಲ್ಲಿನ ಕರಡು ಅಧಿಸೂಚನೆಯನ್ನು ಹೊರಡಿಸಿ, ಬಾಧಿತರಾಗುವ ವ್ಯಕ್ತಿಗಳಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲು ಅವಕಾಶ ನೀಡಲಾಗಿತ್ತು. ಈ ಬಗ್ಗೆ ಸ್ವೀಕರಿಸಲಾದ ಸಲಹೆ/ಆಕ್ಷೇಪಣೆಗಳ ಬಗ್ಗೆ ದಿನಾಂಕ 4–8–2010 ರಂದು ರಾಜ್ಯದ ಬೀಡಿ ಸಂಸ್ಥೆಗಳ ಮಾಲೀಕರುಗಳ ಮತ್ತು ಕಾರ್ಮಿಕ ಸಂಘಟನೆಗಳ ಪ್ರತಿನಿಧಿಗಳ ಸಭೆಯನ್ನು ಕಾರ್ಮಿಕ ಆಯುಕ್ತರು ನಡೆಸಿರುವುದಾಗಿ, ಸದರಿ ಸಭೆಯಲ್ಲಿ ಯಾವುದೇ ಒಮ್ಮತದ ಅಭಿಪ್ರಾಯಕ್ಕೆ ಬಂದಿರುವುದಿಲ್ಲವಾದ್ದರಿಂದ ಕನಿಷ್ಠ ವೇತನವನ್ನು ಪರಿಷ್ಕರಿಸಲು ಕನಿಷ್ಠ ವೇತನ ಕಾಯ್ದೆ 1948ರ ಕಲಂ 5(1)(ಎ) ರಡಿ ಉಪ ಸಮಿತಿಯನ್ನು ರಚಿಸುವಂತೆ ಮೇಲೆ ಓದಲಾದ 2ರ ಪತ್ರದಲ್ಲಿ ಕಾರ್ಮಿಕ ಆಯುಕ್ತರು ಕೋರಿದ್ದಾರೆ. ಕಾರ್ಮಿಕ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 113 ಎಲ್ಎಂಡಬ್ಲ್ಯೂ 2009, ಬೆಂಗಳೂರು, ದಿನಾಂಕ 15ನೇ ನವೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯಾದ್ಯಂತ ಬೀಡಿ ತಯಾರಿಕೆ ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಕನಿಷ್ಠ ವೇತನ ಕಾಯ್ದೆ 1948ರ ಸೆಕ್ಷನ್ 5(1)(ಎ)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಕೆಳಕಂಡ ಸದಸ್ಯರುಗಳನ್ನೊಳಗೊಂಡ ಉಪ ಸಮಿತಿಯನ್ನು ರಚಿಸಲಾಗಿದೆ.

| ಕ್ರ. ಸಂ. | ಹೆಸರು | ಪದನಾಮ |
|---|---|---|
| 1 | ಜಂಟಿ ಕಾರ್ಮಿಕ ಆಯುಕ್ತರು (ಕನಿಷ್ಠ ವೇತನ), ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29. | ಅಧ್ಯಕ್ಷರು |
| 2 | ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಯದರ್ಶಿ, ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿ, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29. | ಸದಸ್ಯ ಕಾರ್ಯದರ್ಶಿ |
| | **ಮಾಲೀಕರ ಪ್ರತಿನಿಧಿಗಳು** | |
| 3 | ಶ್ರೀ ಎಂ. ಜಗನ್ನಾಥ ಶೆಣೈ, ವ್ಯವಸ್ಥಾಪಕ ಪಾಲುದಾರರು, ಮೆ॥ ಮಂಗಳೂರು ಗಣೇಶ ಬೀಡಿ ವರ್ಕ್ಸ್, ವಿನೋಬ ರಸ್ತೆ, ಮೈಸೂರು–570005 | ಸದಸ್ಯರು |
| 4 | ಶ್ರೀ ನಾಗೇಂದ್ರ ಡಿ.ಪೈ, ನಿರ್ದೇಶಕರು, ಮೆ॥ಭಾರತ್ ಬೀಡಿ ವರ್ಕ್ಸ್ ಲಿ., ಕದ್ರಿ ರಸ್ತೆ, ಮಂಗಳೂರು–575 003. | ಸದಸ್ಯರು |
| 5 | ಶ್ರೀ ಪಿ.ರಘುವೀರನಾಯಕ್, ಪ್ರಕಾಶ್ ಬೀಡೀಸ್ ಲಿಮಿಟೆಡ್, ಕೊಡಿಯಾಲ್ ಬೈಲು, ಮಂಗಳೂರು–575 003. | ಸದಸ್ಯರು |
| 6 | ಶ್ರೀ ರಜನಿಕಾಂತ್ ಪಿ. ಪಟೇಲ್, ಅಧ್ಯಕ್ಷರು, ಆಲ್ ಇಂಡಿಯಾ ಬೀಡಿ ಇಂಡಸ್ಟ್ರೀ ಫೆಡರೇಷನ್, ಪ್ರಭುದಾಸ ಕಿಶೋರ್‌ದಾಸ್ ಟೊಬ್ಯಾಕೋ ಪ್ರಾಡಕ್ಟ್ಸ್ ಲಿ., ನಂ. 102, ಪಾಪ್ಯುಲರ್ ಹೌಸ್, ಆಶ್ರಮ ರಸ್ತೆ, ಅಹಮದಬಾದ್–380009. | ಸದಸ್ಯರು |
| | **ಕಾರ್ಮಿಕ ಪ್ರತಿನಿಧಿಗಳು** | |
| 7 | ಶ್ರೀ ವಿ.ಜಿ.ಕೆ. ನಾಯರ್, ಕಾರ್ಯದರ್ಶಿಗಳು, ಸಿ.ಐ.ಟಿ.ಯು. ಸೂರಿ ಭವನ, ಬಿ. ಮೈನ್, ಸಂಪಂಗಿ ರಾಮನಗರ, ಬೆಂಗಳೂರು | ಸದಸ್ಯರು |
| 8 | ಶ್ರೀ ಅನಂತ ಸುಬ್ಬರಾವ್, ಪ್ರಧಾನ ಕಾರ್ಯದರ್ಶಿಗಳು, ಆಲ್ ಇಂಡಿಯಾ ಟ್ರೇಡ್ ಯೂನಿಯನ್ ಕಾಂಗ್ರೆಸ್, ಬೆಂಗಳೂರು–560 020. | ಸದಸ್ಯರು |
| 9 | ಶ್ರೀ ಕೆ.ಸಿ. ಶೌಕತ್, ಪಾಶಾ, ಕಾರ್ಯದರ್ಶಿ, ಮೈಸೂರು ಬೀಡಿ ಮಜ್ದೂರ್ ಅಸೋಸಿಯೇಷನ್, ಅಜೀಜ್‌ಸೇಟ್ ನಗರ, ಮಹದೇವಪುರ ರಸ್ತೆ, ಮೈಸೂರು | ಸದಸ್ಯರು |
| 10 | ಶ್ರೀಮತಿ ಎಚ್. ಮಂಗಳಾಂಭರಾವ್, ರಾಷ್ಟ್ರೀಯ ಪ್ರಧಾನ ಕಾರ್ಯದರ್ಶಿ, ಭಾರತೀಯ ಮಜ್ದೂರ್ ಸಂಘ, ಎಸ್.ಸಿ. ರಸ್ತೆ, ಮೂವಿಲ್ಯಾಂಡ್ ಟಾಕೀಸ್ ಎದುರು, ಬೆಂಗಳೂರು–560 009. | ಸದಸ್ಯರು |

ಸಮಿತಿಯು ಒಂದು ತಿಂಗಳಲ್ಲಿ ತನ್ನ ವರದಿಯನ್ನು ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ.

ಪಿ.ಆರ್.ನಂ. 2666

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ (TPDS) ಯಡಿ ನ್ಯಾಯಬೆಲೆ ಅಂಗಡಿ, ಗ್ರಾಮ ಪಂಚಾಯತ್, ಪಟ್ಟಣ ಪಂಚಾಯತ್/ಪುರಸಭೆ/ನಗರ ಸಭೆ/ನಗರ ಪಾಲಿಕೆಗಳ ವಾರ್ಡ್, ತಾಲ್ಲೂಕು, ಜಿಲ್ಲಾ ಮತ್ತು ರಾಜ್ಯ ಮಟ್ಟದಲ್ಲಿ ಜಾಗೃತ ಸಮಿತಿಗಳ ರಚನೆಯ ಬಗ್ಗೆ.

**ಓದಲಾಗಿದೆ :**
1. ಕೇಂದ್ರ ಸರ್ಕಾರದ ಸಾರ್ವಜನಿಕ ವಿತರಣಾ ಪದ್ಧತಿ (ನಿಯಂತ್ರಣ) ಆದೇಶ, 2001.
2. ಸರ್ಕಾರದ ಆದೇಶ ಸಂಖ್ಯೆ : ಆನಾಸ 34 ಡಿಆರ್ಎ 2003, ದಿನಾಂಕ 4–4–2003.
3. ಕೇಂದ್ರ ಸರ್ಕಾರ ಹೊರಡಿಸಿರುವ ಪರಿಷ್ಕೃತ ಮಾದರಿ ನಾಗರಿಕ ಸನ್ನದು (ಜುಲೈ 2007).
4. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : 20(2)/2009–PD-II, ದಿನಾಂಕ 22–12–2009.

**ಪ್ರಸ್ತಾವನೆ :**

ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ (TPDS) ಯಡಿಯ ಕಾರ್ಯಚಟುವಟಿಕೆಗಳನ್ನು ನಿಯಮಿತವಾಗಿ ಪರಿಶೀಲಿಸಲು ನ್ಯಾಯಬೆಲೆ ಅಂಗಡಿ, ಪಂಚಾಯತ್/ಮುನ್ಸಿಪಲ್ ಕೌನ್ಸಿಲ್/ನಗರ ಪಾಲಿಕೆ ಹಂತಗಳಲ್ಲಿ, ಜಿಲ್ಲಾ, ಬ್ಲಾಕ್ ಮತ್ತು ರಾಜ್ಯ ಮಟ್ಟದಲ್ಲಿ ಜಾಗೃತ ಸಮಿತಿಗಳನ್ನು ರಾಜ್ಯ ಸರ್ಕಾರವು ರಚಿಸಬೇಕೆಂದು ಕೇಂದ್ರ ಸರ್ಕಾರವು ಹೊರಡಿಸಿರುವ ಉಲ್ಲೇಖ (3)ರ ಪರಿಷ್ಕೃತ ಮಾದರಿ ನಾಗರಿಕ ಸನ್ನದು (ಜುಲೈ 2007)ರ ಅಧ್ಯಾಯ–Iರ ಕಂಡಿಕೆ–XI ರಲ್ಲಿ ತಿಳಿಸಲಾಗಿರುತ್ತದೆ. ಈ ಬಗ್ಗೆ ಉಲ್ಲೇಖ (4)ರ ಕೇಂದ್ರ ಸರ್ಕಾರದ ಪತ್ರದಲ್ಲೂ ಪ್ರಸ್ತಾಪಿಸಲಾಗಿದೆ. ಹಾಗೆಯೇ, ಸದರಿ ಜಾಗೃತ ಸಮಿತಿಗಳ ಸಭೆಗಳನ್ನು ನಿಯಮಿತವಾಗಿ ನಡೆಸುವ ಬಗ್ಗೆ ಉಲ್ಲೇಖ (1)ರ ಸಾರ್ವಜನಿಕ ವಿತರಣಾ ಪದ್ಧತಿ (ನಿಯಂತ್ರಣ) ಆದೇಶ, 2001 (Public Distribution System (Control) Order, 2001) ರ ಅನುಬಂಧದ ಪ್ಯಾರ 6(3)ರಲ್ಲಿ ಷರತ್ತು ವಿಧಿಸಲಾಗಿರುತ್ತದೆ ಹಾಗೂ ಪ್ಯಾರ 6(8) ರಲ್ಲಿ ಕೇಂದ್ರ ಸರ್ಕಾರ ಹೊರಡಿಸಿರುವ ಪರಿಷ್ಕೃತ ಮಾದರಿ ನಾಗರಿಕ ಸನ್ನದು (ಜುಲೈ 2007)ರ ಆಧಾರದ ಮೇಲೆ ರಾಜ್ಯ ಸರ್ಕಾರವು ನಾಗರಿಕ ಸನ್ನದನ್ನು ಹೊರಡಿಸಿ, ಅಳವಡಿಸಿಕೊಳ್ಳಬೇಕೆಂದು ತಿಳಿಸಲಾಗಿರುತ್ತದೆ.

ಸರ್ಕಾರವು ಉಲ್ಲೇಖ (2)ರಂತೆ ನ್ಯಾಯಬೆಲೆ ಅಂಗಡಿಯ ಹಂತದ ಜಾಗೃತ ಸಮಿತಿಗಳನ್ನು ರಚಿಸಿ ಆದೇಶವನ್ನು ಹೊರಡಿಸಿರುತ್ತದೆ. ಅದರ ಬದಲಾಗಿ ನೂತನವಾಗಿ ನ್ಯಾಯಬೆಲೆ ಅಂಗಡಿ ಹಂತದ ಜಾಗೃತ ಸಮಿತಿಯ ಅಧ್ಯಕ್ಷರನ್ನು ನೇಮಿಸುವ ಮತ್ತು ಸದಸ್ಯರ ಸಂಖ್ಯೆಯನ್ನು ಉಲ್ಲೇಖ (3)ರ ಪರಿಷ್ಕೃತ ಮಾದರಿ ನಾಗರಿಕ ಸನ್ನದು (ಜುಲೈ 2007)ರಂತೆ ಪರಿಷ್ಕರಣೆ ಮಾಡಬೇಕಿದೆ. ಉಳಿದಂತೆ ಗ್ರಾಮ ಪಂಚಾಯತ್, ಪಟ್ಟಣ ಪಂಚಾಯತ್/ಪುರಸಭೆ/ನಗರ ಸಭೆ/ನಗರ ಪಾಲಿಕೆಗಳ ವಾರ್ಡ್, ತಾಲ್ಲೂಕು, ಜಿಲ್ಲಾ ಮತ್ತು ರಾಜ್ಯ ಮಟ್ಟದ ಜಾಗೃತ ಸಮಿತಿಗಳನ್ನು ಹೊಸದಾಗಿ ರಚಿಸಬೇಕಿದೆ.

ಮೇಲೆ ಓದಲಾದ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಉಲ್ಲೇಖ (2)ರ ಸರ್ಕಾರದ ಆದೇಶವನ್ನು ನಿರಸನಗೊಳಿಸಿ ಅದರ ಬದಲಾಗಿ ನ್ಯಾಯಬೆಲೆ ಅಂಗಡಿ ಹಂತದ ಜಾಗೃತ ಸಮಿತಿಯನ್ನು ಪರಿಷ್ಕರಿಸಿ ರಚಿಸಲು ಹಾಗೂ ಗ್ರಾಮ ಪಂಚಾಯತ್, ಪಟ್ಟಣ ಪಂಚಾಯತ್/ಪುರಸಭೆ/ನಗರ ಸಭೆ/ನಗರ ಪಾಲಿಕೆಗಳ ವಾರ್ಡ್, ತಾಲ್ಲೂಕು, ಜಿಲ್ಲಾ ಮತ್ತು ರಾಜ್ಯ ಮಟ್ಟದ ಜಾಗೃತ ಸಮಿತಿಗಳನ್ನು ಹೊಸದಾಗಿ ರಚಿಸಲು ಉದ್ದೇಶಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಅನಾಸ 148 ಡಿಆರ್ಎ 2010, ಬೆಂಗಳೂರು, ದಿನಾಂಕ 29ನೇ ಅಕ್ಟೋಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ (TPDS) ಯಡಿ ಪ್ರಸ್ತುತ ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ನ್ಯಾಯಬೆಲೆ ಅಂಗಡಿ ಹಂತದ ಜಾಗೃತ ಸಮಿತಿ ರಚನೆಯ ಸಂಬಂಧ ಕೆಲವು ಬದಲಾವಣೆಗಳನ್ನು ಮಾಡಿ ಹಾಗೂ ಗ್ರಾಮ ಪಂಚಾಯತ್, ಪಟ್ಟಣ ಪಂಚಾಯತ್/ಪುರಸಭೆ/ನಗರ ಸಭೆ/ನಗರ ಪಾಲಿಕೆಗಳ ವಾರ್ಡ್, ತಾಲ್ಲೂಕು, ಜಿಲ್ಲಾ ಮತ್ತು ರಾಜ್ಯ ಮಟ್ಟದ ಜಾಗೃತ ಸಮಿತಿಗಳನ್ನು ರಚಿಸುವ ಸಂಬಂಧ, ಅವುಗಳ ಕಾರ್ಯನಿರ್ವಹಣೆಗಳಿಗೆ ಸಂಬಂಧಿಸಿದಂತೆ ಸರ್ಕಾರವು ಈ ಕೆಳಕಂಡಂತೆ ಕ್ರಮವಹಿಸಲು ಆದೇಶಿಸಿದೆ.

**1. ನ್ಯಾಯಬೆಲೆ ಅಂಗಡಿ ಹಂತದ ಜಾಗೃತ ಸಮಿತಿ :**

(ಅ) ಪ್ರಸ್ತುತ ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ನ್ಯಾಯಬೆಲೆ ಅಂಗಡಿ ಹಂತದ ಜಾಗೃತ ಸಮಿತಿಗೆ ಅಧ್ಯಕ್ಷರ ನೇಮಕ ಮತ್ತು ಸದಸ್ಯರ ಸಂಖ್ಯೆಯು ಈ ಕೆಳಕಂಡಂತೆ ಇರತಕ್ಕದ್ದು. ಈ ಸಮಿತಿಯನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳು ರಚಿಸತಕ್ಕದ್ದು ಹಾಗೂ ಸಮಿತಿಯ ಅಧಿಕಾರಾವಧಿಯು ಎರಡು ವರ್ಷ ಆರು ತಿಂಗಳು ಆಗಿರತಕ್ಕದ್ದು.

| | | |
|---|---|---|
| i. | ಗ್ರಾಮ ಪಂಚಾಯತ್ ಅಧ್ಯಕ್ಷರು | ಅಧ್ಯಕ್ಷರು |
| ii. | ನ್ಯಾಯಬೆಲೆ ಅಂಗಡಿ ವ್ಯಾಪ್ತಿಯಲ್ಲಿನ ಇಬ್ಬರು ಗ್ರಾಮ ಪಂಚಾಯತಿ ಸದಸ್ಯರು | 2 ಜನ ಸದಸ್ಯರು |
| iii. | 3 ಜನ BPL/AAY ಪಡಿತರ ಚೀಟಿದಾರರು – (ಮೂರು ಮಹಿಳಾ ಸದಸ್ಯರಿರಬೇಕು ಅದರಲ್ಲಿ ಒಬ್ಬರು ಪರಿಶಿಷ್ಟ ಜಾತಿ, ಒಬ್ಬರು ಪರಿಶಿಷ್ಟ ಪಂಗಡ ಹಾಗೂ ಒಬ್ಬರು ಹಿಂದುಳಿದ ವರ್ಗಕ್ಕೆ ಸೇರಿದವರಿರಬೇಕು). | 3 ಜನ ಸದಸ್ಯರು |
| iv. | ಒಬ್ಬ ಸಮಾಜ ಸೇವಾಕಾರ್ಯಕರ್ತರು ಅಥವಾ ಸ್ಥಳೀಯ ಮಹಿಳಾ ಸ್ವಸಹಾಯ ಗುಂಪಿನ ಅಧ್ಯಕ್ಷರು ಅಥವಾ ಸ್ತ್ರೀ ಶಕ್ತಿ ಗುಂಪಿನ ಅಧ್ಯಕ್ಷ ಸದಸ್ಯರಿರಬೇಕು | ಒಬ್ಬ ಸದಸ್ಯರು |
| v. | ಗ್ರಾಮ ಪಂಚಾಯತ್‌ನ ಬಿಲ್ ಕಲೆಕ್ಟರ್ | ಸದಸ್ಯ–ಕಾರ್ಯದರ್ಶಿ |

(ಆ) ಸಭೆಯನ್ನು ಕನಿಷ್ಠ ಮೂರು ತಿಂಗಳಿಗೊಮ್ಮೆಯಾದರು ನಡೆಸಬೇಕು. ತಿಂಗಳ ಮೊದಲನೇ ವಾರದಲ್ಲಿ ಸಭೆ ನಡೆಸತಕ್ಕದ್ದು.

**2. ಗ್ರಾಮ ಪಂಚಾಯತ್ ಮಟ್ಟದ ಜಾಗೃತ ಸಮಿತಿ :**

(ಅ) ಉಲ್ಲೇಖ (3)ರ ಪರಿಷ್ಕೃತ ಮಾದರಿ ನಾಗರಿಕ ಸನ್ನದು (ಜುಲೈ 2007) ರ ಸೂಚನೆಯಂತೆ ಗ್ರಾಮ ಪಂಚಾಯತ್ ಮಟ್ಟದ ಜಾಗೃತ ಸಮಿತಿಯ ಸ್ವರೂಪವು ಈ ಕೆಳಕಂಡಂತೆ ಇರತಕ್ಕದ್ದು. ಈ ಸಮಿತಿಯನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳು ರಚಿಸತಕ್ಕದ್ದು ಹಾಗೂ ಸಮಿತಿಯ ಅಧಿಕಾರಾವಧಿಯು ಎರಡು ವರ್ಷ ಆರು ತಿಂಗಳು ಆಗಿರತಕ್ಕದ್ದು.

| | | |
|---|---|---|
| i. | ಗ್ರಾಮ ಪಂಚಾಯತಿಯ ಅಧ್ಯಕ್ಷರು | ಅಧ್ಯಕ್ಷರು |
| ii. | ಗ್ರಾಮ ಪಂಚಾಯತಿಯ ಉಪಾಧ್ಯಕ್ಷರು | ಸದಸ್ಯರು |
| iii. | 3 ಜನ BPL/AAY ಪಡಿತರ ಚೀಟಿದಾರರು – (ಮೂರು ಮಹಿಳಾ ಸದಸ್ಯರಿರಬೇಕು ಅದರಲ್ಲಿ ಒಬ್ಬರು ಪರಿಶಿಷ್ಟ ಜಾತಿ, ಒಬ್ಬರು ಪರಿಶಿಷ್ಟ ವರ್ಗ ಹಾಗೂ ಒಬ್ಬರು ಹಿಂದುಳಿದ ವರ್ಗಕ್ಕೆ ಸೇರಿದವರಾಗಿರಬೇಕು). | 3 ಜನ ಸದಸ್ಯರು |
| iv. | ಇಬ್ಬರು ಗ್ರಾಮ ಪಂಚಾಯತಿಯ ಸದಸ್ಯರು | 2 ಜನ ಸದಸ್ಯರು |
| v. | ಒಬ್ಬ ಸಮಾಜ ಸೇವಾಕಾರ್ಯಕರ್ತರು ಅಥವಾ ಸ್ಥಳೀಯ ಮಹಿಳಾ ಸ್ವಸಹಾಯ ಗುಂಪಿನ ಅಧ್ಯಕ್ಷರು ಅಥವಾ ಸ್ತ್ರೀ ಶಕ್ತಿ ಗುಂಪಿನ ಅಧ್ಯಕ್ಷ ಸದಸ್ಯರಿರಬೇಕು | ಸದಸ್ಯರು |
| vi. | ಗ್ರಾಮ ಪಂಚಾಯತಿಯ ಕಾರ್ಯದರ್ಶಿ | ಸದಸ್ಯ–ಕಾರ್ಯದರ್ಶಿ |

(ಆ) ಸಭೆಯನ್ನು ಕನಿಷ್ಠ ಮೂರು ತಿಂಗಳಿಗೊಮ್ಮೆಯಾದರೂ ನಡೆಸಬೇಕು. ತಿಂಗಳ ಮೊದಲನೇ ವಾರದಲ್ಲಿ ಸಭೆ ನಡೆಸತಕ್ಕದ್ದು.

**3. ಪಟ್ಟಣ ಪಂಚಾಯತ್/ಪುರಸಭೆ/ನಗರಸಭೆ/ನಗರ ಪಾಲಿಕೆಗಳ ವಾರ್ಡ್ ಹಂತದ ಜಾಗೃತ ಸಮಿತಿ :**

(ಅ) ಉಲ್ಲೇಖ (3)ರ ಪರಿಷ್ಕೃತ ಮಾದರಿ ನಾಗರಿಕ ಸನ್ನದು (ಜುಲೈ 2007) ರ ಸೂಚನೆಯಂತೆ ಪಟ್ಟಣ ಪಂಚಾಯತ್/ಪುರಸಭೆ/ನಗರ ಸಭೆ/ನಗರ ಪಾಲಿಕೆಗಳ ವಾರ್ಡ್ ಹಂತದ ಜಾಗೃತ ಸಮಿತಿಯ ಸ್ವರೂಪವು ಈ ಕೆಳಕಂಡಂತೆ ಇರತಕ್ಕದ್ದು. ಈ ಸಮಿತಿಯನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳು ರಚಿಸತಕ್ಕದ್ದು ಹಾಗೂ ಸಮಿತಿಯ ಅಧಿಕಾರಾವಧಿಯು ಎರಡು ವರ್ಷ ಆರು ತಿಂಗಳು ಆಗಿರತಕ್ಕದ್ದು.

| | | |
|---|---|---|
| i. | ಪಟ್ಟಣ ಪಂಚಾಯ್ತಿ/ಪುರಸಭೆ/ನಗರ ಪಾಲಿಕೆ | ಅಧ್ಯಕ್ಷರು |
| ii. | ಪಟ್ಟಣ ಪಂಚಾಯ್ತಿ/ಪುರಸಭೆ/ನಗರ ಪಾಲಿಕೆ ಉಪಾಧ್ಯಕ್ಷರು | ಸದಸ್ಯರು |
| iii. | ಪಾಲಿಕೆ ವಾರ್ಡ್‌ನಲ್ಲಿ ಆಯ್ಕೆಯಾದ ಒಬ್ಬ ಸದಸ್ಯರು | ಸದಸ್ಯರು |
| iv. | 3 ಮಂದಿ BPL/AAY ಪಡಿತರ ಚೀಟಿದಾರರು – (ಮೂರು ಮಹಿಳಾ ಸದಸ್ಯರಿರಬೇಕು ಅದರಲ್ಲಿ ಒಬ್ಬರು ಪರಿಶಿಷ್ಟ ಜಾತಿ, ಒಬ್ಬರು ಪರಿಶಿಷ್ಟ ವರ್ಗ ಹಾಗೂ ಒಬ್ಬರು ಹಿಂದುಳಿದ ವರ್ಗಕ್ಕೆ ಸೇರಿದವರಾಗಿರಬೇಕು). | 3 ಜನ ಸದಸ್ಯರು |
| v. | ಸಮಾಜ ಸೇವಾ ಕಾರ್ಯಕರ್ತರು/ಸ್ತ್ರೀ ಶಕ್ತಿ ಸಂಘದ ಅಧ್ಯಕ್ಷರು/ ಸ್ವಸಹಾಯ ಗುಂಪಿನ ಅಧ್ಯಕ್ಷರು/ಗ್ರಾಹಕರ ಹಿತರಕ್ಷಣಾ ಸಮಿತಿಯ ಅಧ್ಯಕ್ಷರು | 2 ಜನ ಸದಸ್ಯರು |
| vi. | ಪುರಸಭೆ/ನಗರ ಸಭೆ/ನಗರ ಪಾಲಿಕೆ ವಾರ್ಡ್ ಹಾಗೂ ಸಂಬಂಧಪಟ್ಟ ವಾರ್ಡ್‌ನ ಕಂದಾಯ ನಿರೀಕ್ಷಕರು | ಸದಸ್ಯ–ಕಾರ್ಯದರ್ಶಿ |

(ಆ) ಸಭೆಯನ್ನು ಕನಿಷ್ಠ ಮೂರು ತಿಂಗಳಿಗೊಮ್ಮೆಯಾದರು ನಡೆಸಬೇಕು. ತಿಂಗಳ ಮೊದಲನೇ ವಾರದಲ್ಲಿ ಸಭೆ ನಡೆಸತಕ್ಕದ್ದು.

**4. ನ್ಯಾಯಬೆಲೆ ಅಂಗಡಿ ಮಟ್ಟದ ಗ್ರಾಮ ಪಂಚಾಯತ್ ಮಟ್ಟದ, ಪಟ್ಟಣ ಪಂಚಾಯತ್/ಪುರಸಭೆ/ ನಗರಸಭೆ/ನಗರ ಪಾಲಿಕೆಗಳ ವಾರ್ಡ್ ಹಂತದ ಜಾಗೃತ ಸಮಿತಿಯ ಕಾರ್ಯ, ಜವಾಬ್ದಾರಿ ಈ ಕೆಳಕಂಡಂತಿರುತ್ತದೆ :**

i. ನ್ಯಾಯಬೆಲೆ ಅಂಗಡಿಯವರು ನಿಗದಿತ ವೇಳೆಯಲ್ಲಿ ಬಾಗಿಲನ್ನು ತೆರೆದು ಪಡಿತರ ವಿತರಣೆ ಕಾರ್ಯವನ್ನು ನಿರ್ವಹಿಸುತ್ತಿರುವರೇ? ನಿಗದಿಪಡಿಸಿರುವ ಸಮಯದಂತೆ ಕಾರ್ಯ ನಿರ್ವಹಿಸುತ್ತಿರುವರೇ?

ii. ನ್ಯಾಯಬೆಲೆ ಅಂಗಡಿ ಮಾಲೀಕರು ಮಾಹೆಯಾನ ಅವರಿಗೆ ಹಂಚಿಕೆ ಮಾಡಿರುವ ದಾಸ್ತಾನನ್ನು ನಿಗದಿತ ಸಮಯದಲ್ಲಿ ಎತ್ತುವಳಿ ಮಾಡುತ್ತಿರುವರೇ?

iii. ನ್ಯಾಯಬೆಲೆ ಅಂಗಡಿಯವರು ಪಡಿತರ ವಸ್ತುಗಳನ್ನು ನಿಗದಿತ ದರ ಹಾಗೂ ನಿಗದಿತ ಪ್ರಮಾಣದಲ್ಲಿ ವಿತರಿಸುತ್ತಿರುವರೇ?

iv. ನ್ಯಾಯಬೆಲೆ ಅಂಗಡಿಯಲ್ಲಿ ಅಗತ್ಯ ಪ್ರಮಾಣದ ಆಹಾರಧಾನ್ಯಗಳನ್ನು ಮಾಹೆಯ ಎಲ್ಲಾ ದಿನಗಳಲ್ಲೂ ಪಡಿತರ ಚೀಟಿದಾರರಿಗೆ ಲಭ್ಯವಾಗುವಂತೆ ನಿರ್ವಹಿಸುತ್ತಿರುವರೇ?

v. ನ್ಯಾಯಬೆಲೆ ಅಂಗಡಿಗಳ ಮೂಲಕ ವಿತರಿಸಲಾಗುತ್ತಿರುವ ಆಹಾರಧಾನ್ಯಗಳ ಗುಣಮಟ್ಟವು ತೃಪ್ತಿಕರವಾಗಿದೆಯೇ?

vi. ನ್ಯಾಯಬೆಲೆ ಅಂಗಡಿಯವರು ಉಪಯೋಗಿಸುತ್ತಿರುವ ತೂಕ ಮತ್ತು ಅಳತೆಯ ಬೊಟ್ಟುಗಳನ್ನು ಅಳತೆ ಮತ್ತು ತೂಕ ಮಾಪನ ಇಲಾಖೆಯಿಂದ ದೃಢೀಕರಿಸಿಕೊಳ್ಳಲಾಗಿದೆಯೇ?

vii. ನ್ಯಾಯಬೆಲೆ ಅಂಗಡಿ ವ್ಯಾಪ್ತಿಯ ಪಡಿತರ ಚೀಟಿದಾರರು ಪಡಿತರವನ್ನು ಪಡೆದುಕೊಳ್ಳುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳೇನಾದರೂ ಇದ್ದರೆ ಅಂತಹ ಸಮಸ್ಯೆಗಳ ಬಗ್ಗೆಯೂ ಪರಿಶೀಲಿಸುವುದು.

viii. ನ್ಯಾಯಬೆಲೆ ಅಂಗಡಿಯವರು ಎಲ್ಲಾ ಮಾಹಿತಿಗಳನ್ನೊಳಗೊಂಡಂತೆ ಲಭ್ಯವಿರುವ ದಾಸ್ತಾನು, ದರ ಮತ್ತು ವಿತರಣಾ ಪ್ರಮಾಣ ಸೂಚಿಸುವ ವಿವರಗಳುಳ್ಳ ಫಲಕವನ್ನು ಹಾಗೂ ಪಡಿತರ ವಿತರಣೆಯ ಸಮಯವನ್ನು ಪ್ರದರ್ಶಿಸಿರುವರೇ?

ix. ನ್ಯಾಯಬೆಲೆ ಅಂಗಡಿಯವರು ವಿತರಿಸಿದ ಪ್ರಮಾಣಕ್ಕೆ ಪಡಿತರ ಚೀಟಿದಾರರಿಗೆ ಬಿಲ್ಲನ್ನು ನೀಡುತ್ತಿರುವರೇ? – ಎಂಬುದರ ಬಗ್ಗೆ ಪರಿಶೀಲಿಸಿ ಸರಿಪಡಿಸುವುದು.

x. ನ್ಯಾಯಬೆಲೆ ಅಂಗಡಿಗಳಲ್ಲಿನ ಲೋಪದೋಷಗಳು ಏನಾದರೂ ಇದ್ದಲ್ಲಿ, ಅದರ ಬಗ್ಗೆ ವರದಿಯನ್ನು ಸಮಿತಿಯ ಸದಸ್ಯ ಕಾರ್ಯದರ್ಶಿಯವರು ಸಂಬಂಧಪಟ್ಟ ತಹಶೀಲ್ದಾರರಿಗೆ ಸಲ್ಲಿಸುವುದು.

xi. ಸಮಿತಿಯು ನಡವಳಿ ವಹಿಯನ್ನು ನಿರ್ವಹಿಸತಕ್ಕದ್ದು ಮತ್ತು ಪ್ರತಿ ಸಭೆ ನಡೆದ ಒಂದು ವಾರದೊಳಗೆ ಸಂಬಂಧಪಟ್ಟ ತಹಶೀಲ್ದಾರ್‌ರವರಿಗೆ ಸಭೆಯ ನಡವಳಿಯನ್ನು ಸಲ್ಲಿಸತಕ್ಕದ್ದು. ತಹಶೀಲ್ದಾರ್‌ರವರು ಕ್ರೋಢೀಕೃತ ವರದಿಯನ್ನು ತಾಲ್ಲೂಕು ಮಟ್ಟದ ಜಾಗೃತ ಸಮಿತಿಯಲ್ಲಿ ಚರ್ಚಿಸಿ ಸೂಕ್ತ ಕ್ರಮವಹಿಸುವುದು.

**5. ತಾಲ್ಲೂಕು ಮಟ್ಟದ ಜಾಗೃತ ಸಮಿತಿ :**

(ಅ) ಉಲ್ಲೇಖ (3)ರ ಪರಿಷ್ಕೃತ ಮಾದರಿ ನಾಗರಿಕ ಸನ್ನದು (ಜುಲೈ 2007) ರ ಸೂಚನೆಯಂತೆ ತಾಲ್ಲೂಕು ಮಟ್ಟದ ಜಾಗೃತ ಸಮಿತಿಯ ಸ್ವರೂಪವು ಈ ಕೆಳಕಂಡಂತೆ ಇರತಕ್ಕದ್ದು. ಈ ಸಮಿತಿಯನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳು ರಚಿಸತಕ್ಕದ್ದು ಹಾಗೂ ಸಮಿತಿಯ ಅಧಿಕಾರಾವಧಿಯು ಎರಡು ವರ್ಷ ಆರು ತಿಂಗಳು ಆಗಿರತಕ್ಕದ್ದು.

| | | |
|---|---|---|
| i. | ಅಧ್ಯಕ್ಷರು ತಾಲ್ಲೂಕು ಪಂಚಾಯತ್ | ಅಧ್ಯಕ್ಷರು |
| ii. | ಅಧ್ಯಕ್ಷರು, ತಾಲ್ಲೂಕು ಕೇಂದ್ರದ ಪುರಸಭೆ, ಪಟ್ಟಣ ಪಂಚಾಯತ್ | ಸದಸ್ಯರು |
| iii. | ಉಪಾಧ್ಯಕ್ಷರು, ತಾಲ್ಲೂಕು ಪಂಚಾಯತ್ | ಸದಸ್ಯರು |
| iv. | ಉಪಾಧ್ಯಕ್ಷರು, ತಾಲ್ಲೂಕು ಕೇಂದ್ರದ ಪುರಸಭೆ, ಪಟ್ಟಣ ಪಂಚಾಯತ್ | ಸದಸ್ಯರು |
| v. | ತಾಲ್ಲೂಕಿನ ಎಲ್ಲಾ ಹೋಬಳಿ, ಪಟ್ಟಣಗಳಿಂದ ತಲಾ ಒಬ್ಬರಂತೆ AAY /BPL ಪಡಿತರ ಚೀಟಿದಾರರು – (ಇವರಲ್ಲಿ ಮೂವರು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗದ ಮಹಿಳೆಯರು ಕಡ್ಡಾಯವಾಗಿ ಇರತಕ್ಕದ್ದು.) | 6 ಮಂದಿ ಸದಸ್ಯರು |
| vi. | ಸಾಮಾಜಿಕ ಕಾರ್ಯಕರ್ತರು | ಇಬ್ಬರು ಸದಸ್ಯರು |
| vii. | ಕಾರ್ಯನಿರ್ವಾಹಕ ಅಧಿಕಾರಿಗಳು | ಸದಸ್ಯರು |
| viii. | ತಹಸೀಲ್ದಾರರು | ಸದಸ್ಯ–ಕಾರ್ಯದರ್ಶಿಗಳು |

(ಆ) ತಾಲ್ಲೂಕಿನ ಎಲ್ಲಾ ನ್ಯಾಯಬೆಲೆ ಅಂಗಡಿಗಳ ವ್ಯಾಪ್ತಿಯನ್ನು ಸಮಿತಿಯು ಒಳಗೊಂಡಿದ್ದು, ಪಡಿತರ ಪದಾರ್ಥಗಳನ್ನು ಸೋರಿಕೆಯಾಗದಂತೆ ಫಲಾನುಭವಿ ಪಡಿತರ ಚೀಟಿದಾರರಿಗೆ ತಲುಪಿಸುವಿಕೆಯನ್ನು ಖಚಿತಪಡಿಸಿಕೊಳ್ಳತಕ್ಕದ್ದು, ನ್ಯಾಯಬೆಲೆ ಅಂಗಡಿಗಳ ಕಾರ್ಯನಿರ್ವಹಣೆ ಹಾಗೂ ಅವುಗಳಿಗೆ ಸಂಬಂಧಿಸಿದ ಇತರೆ ಸಮಸ್ಯೆಗಳ ಬಗ್ಗೆ ಜಿಲ್ಲಾ ಮಟ್ಟದ ಜಾಗೃತ ಸಮಿತಿಗೆ ವರದಿ ಮಾಡತಕ್ಕದ್ದು.

(ಇ) ತಾಲ್ಲೂಕು ಮಟ್ಟದ ಜಾಗೃತ ಸಮಿತಿ ಸಭೆಯನ್ನು ಪ್ರತಿ ತಿಂಗಳು ನಿಯತಕಾಲಿಕವಾಗಿ ನಡೆಸತಕ್ಕದ್ದು. ಅದು ಪ್ರತಿ ತಿಂಗಳ ಮೊದಲ ವಾರದಲ್ಲಿ ನಡೆಯತಕ್ಕದ್ದು.

**6. ಜಿಲ್ಲಾ ಮಟ್ಟದ ಜಾಗೃತ ಸಮಿತಿ :**

(ಅ) ಉಲ್ಲೇಖ (3)ರ ಪರಿಷ್ಕೃತ ಮಾದರಿ ನಾಗರಿಕ ಸನ್ನದು (ಜುಲೈ 2007) ರ ಸೂಚನೆಯಂತೆ ಜಿಲ್ಲಾ ಮಟ್ಟದ ಜಾಗೃತ ಸಮಿತಿಯ ಸ್ವರೂಪವು ಈ ಕೆಳಕಂಡಂತೆ ಇರತಕ್ಕದ್ದು. ಈ ಸಮಿತಿಯನ್ನು ರಾಜ್ಯ ಸರ್ಕಾರವು ರಚಿಸುವುದು ಹಾಗೂ ಸಮಿತಿಯ ಅಧಿಕಾರಾವಧಿಯು ಎರಡು ವರ್ಷ ಆರು ತಿಂಗಳು ಆಗಿರತಕ್ಕದ್ದು.

| | | |
|---|---|---|
| i. | ಅಧ್ಯಕ್ಷರು ಜಿಲ್ಲಾ ಪಂಚಾಯತ್ | ಅಧ್ಯಕ್ಷರು |
| ii. | ಜಿಲ್ಲಾಧಿಕಾರಿಗಳು | ಸದಸ್ಯರು |
| iii. | ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು | ಸದಸ್ಯರು |
| iv. | ಜಿಲ್ಲಾ ಕೇಂದ್ರದ ನಗರಸಭೆ ಅಧ್ಯಕ್ಷರು | ಸದಸ್ಯರು |
| v. | ಜಿಲ್ಲಾ ಪಂಚಾಯತ್ ಉಪಾಧ್ಯಕ್ಷರು | ಸದಸ್ಯರು |
| vi. | ಜಿಲ್ಲಾ ಕೇಂದ್ರದ ನಗರಸಭೆಯ ಉಪಾಧ್ಯಕ್ಷರು | ಸದಸ್ಯರು |
| vii. | ಮೂರು ಮಂದಿ ಫಲಾನುಭವಿ ಪಡಿತರ ಚೀಟಿದಾರರು (ಇವರಲ್ಲಿ ಕ್ರಮವಾಗಿ ಒಬ್ಬರು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಒಬ್ಬರು ಹಿಂದುಳಿದ ವರ್ಗಕ್ಕೆ ಸೇರಿರತಕ್ಕದ್ದು.) | ಮೂರು ಸದಸ್ಯರು |
| viii. | ಇಬ್ಬರು ಸಾಮಾಜಿಕ ಕಾರ್ಯಕರ್ತರು–ಗ್ರಾಹಕ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವವರು | ಇಬ್ಬರು ಸದಸ್ಯರು |
| ix. | ಉಪ ನಿರ್ದೇಶಕರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ | ಸದಸ್ಯ–ಕಾರ್ಯದರ್ಶಿಗಳು |

(ಆ) ಜಿಲ್ಲಾ ಮಟ್ಟದ ಜಾಗೃತ ಸಮಿತಿಯು ತನ್ನ ಹಂತದಲ್ಲೇ ಸಮಸ್ಯೆಗಳನ್ನು ಬಗೆಹರಿಸಲು/ಪರಿಹಾರ ಕಂಡುಕೊಳ್ಳಲು ಅಧಿಕಾರ ಹೊಂದಿರುತ್ತದೆ. ಹಾಗೆ ಸಾಧ್ಯವಾಗದಿದ್ದಲ್ಲಿ, ತನ್ನ ಶಿಫಾರಸಿನೊಂದಿಗೆ ರಾಜ್ಯಮಟ್ಟದ ಜಾಗೃತ ಸಮಿತಿಗೆ ಕಳುಹಿಸತಕ್ಕದ್ದು.

(ಇ) ಜಿಲ್ಲಾ ಮಟ್ಟದ ಜಾಗೃತ ಸಮಿತಿ ಸಭೆಯನ್ನು ನಿಯತಕಾಲಿಕವಾಗಿ ಪ್ರತಿ ತಿಂಗಳು ನಡೆಸತಕ್ಕದ್ದು. ಸಭೆಯು ಪ್ರತಿ ತಿಂಗಳ ಮೊದಲ ವಾರದಲ್ಲಿ ನಡೆಯತಕ್ಕದ್ದು.

**7. ರಾಜ್ಯ ಮಟ್ಟದ ಜಾಗೃತ ಸಮಿತಿ :**

(ಅ) ಉಲ್ಲೇಖ (3)ರ ಪರಿಷ್ಕೃತ ಮಾದರಿ ನಾಗರಿಕ ಸನ್ನದು (ಜುಲೈ 2007) ರ ಸೂಚನೆಯಂತೆ ರಾಜ್ಯ ಮಟ್ಟದ ಜಾಗೃತ ಸಮಿತಿಯ ಸ್ವರೂಪವು ಈ ಕೆಳಕಂಡಂತೆ ಇರತಕ್ಕದ್ದು. ಈ ಜಾಗೃತ ಸಮಿತಿಯನ್ನು ರಾಜ್ಯ ಸರ್ಕಾರವು ರಚಿಸುವುದು ಹಾಗೂ ಸಮಿತಿಯ ಅಧಿಕಾರಾವಧಿಯು ಎರಡು ವರ್ಷ ಆರು ತಿಂಗಳು ಆಗಿರತಕ್ಕದ್ದು.

| | | |
|---|---|---|
| i. | ಸಚಿವರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಕರ್ನಾಟಕ ಸರ್ಕಾರ | ಅಧ್ಯಕ್ಷರು |
| ii. | ಮೂರು ಜನ ಲೋಕಸಭಾ ಸದಸ್ಯರು | ಮೂರು ಸದಸ್ಯರು |
| iii. | ಮೂರು ಜನ ವಿಧಾನಸಭಾ ಸದಸ್ಯರು | ಮೂರು ಸದಸ್ಯರು |
| iv. | ಗ್ರಾಹಕ ಕಲ್ಯಾಣ ಸಂಸ್ಥೆಯ ಸದಸ್ಯರು | ಇಬ್ಬರು ಸದಸ್ಯರು |
| v. | ಯುವಕ ಸಂಘಟನೆಯ ಸದಸ್ಯರು | ಇಬ್ಬರು ಸದಸ್ಯರು |
| vi. | ಮಹಿಳಾ ಸಂಘಟನೆಯ ಸದಸ್ಯರು | ಇಬ್ಬರು ಸದಸ್ಯರು |

| | | |
|---|---|---|
| vii. | ಸರ್ಕಾರದ ಕಾರ್ಯದರ್ಶಿ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ | ಸದಸ್ಯರು |
| viii. | ಸರ್ಕಾರದ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| ix. | ಸರ್ಕಾರದ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ | ಸದಸ್ಯರು |
| x. | ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ | ಸದಸ್ಯ–ಕಾರ್ಯದರ್ಶಿಗಳು |

(ಆ) ರಾಜ್ಯದಲ್ಲಿ TPDS ಕಾರ್ಯಕ್ರಮದ ಎಲ್ಲಾ ಕಾರ್ಯಚಟುವಟಿಕೆ, ಸಮರ್ಪಕ ಕಾರ್ಯನಿರ್ವಹಣೆಯಲ್ಲಿ ಯಾವುದಾದರೂ ತೊಂದರೆಗಳು ಎದುರಾಗಿದ್ದರೆ ಅವುಗಳ ಬಗ್ಗೆ ಸಮಿತಿಯು ತ್ರೈಮಾಸಿಕವಾಗಿ ಸಭೆ ಸೇರಿ ಪರಿಶೀಲಿಸತಕ್ಕದ್ದು.

(ಇ) ಸಮಿತಿ/ಅದರ ಸದಸ್ಯರು ನ್ಯಾಯಬೆಲೆ ಅಂಗಡಿಗಳ ಮತ್ತು ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಕಛೇರಿಗಳಿಗೆ ಭೇಟಿ ನೀಡಬಹುದು ಹಾಗೂ ಕಾರ್ಯಕ್ರಮದ ಫಲಾನುಭವಿಗಳನ್ನು ಭೇಟಿ ಮಾಡಬಹುದು ಮತ್ತು TPDS ಅನುಷ್ಠಾನದಲ್ಲಿರುವ ಯಾವುದೇ ಸಮಸ್ಯೆಗಳಿಗೆ ಪರಿಹಾರ ಕ್ರಮಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ಶಿಫಾರಸ್ಸು ಮಾಡಬಹುದು.

(ಈ) ಯಾವುದೇ ಸಮಸ್ಯೆಗಳ ಮೇಲಿನ ಸಮಿತಿಯ ನಿರ್ಧಾರವು ಕೇಂದ್ರ ಸರ್ಕಾರದ ಪರಿವ್ಯಾಪ್ತಿಯಲ್ಲಿದ್ದರೆ, ರಾಜ್ಯಮಟ್ಟದ ಜಾಗೃತ ಸಮಿತಿಯು ಪರಿಹಾರ ಕ್ರಮದ ಶಿಫಾರಸನ್ನು ಕೇಂದ್ರ ಸರ್ಕಾರಕ್ಕೆ ಕಳುಹಿಸಬಹುದು.

(ಉ) ತಾಲ್ಲೂಕು, ಜಿಲ್ಲಾ, ರಾಜ್ಯ ಮಟ್ಟದ ಜಾಗೃತ ಸಮಿತಿಗಳು ಗುರುತಿಸಿದ ಸಮಸ್ಯೆಗಳನ್ನು ಪರಿಹರಿಸಲು ರಾಜ್ಯ ಸರ್ಕಾರವು ಒಂದು ವ್ಯವಸ್ಥೆಯನ್ನು ಅನುಷ್ಠಾನಗೊಳಿಸತಕ್ಕದ್ದು.

(ಊ) ರಾಜ್ಯ ಮಟ್ಟದ ಜಾಗೃತ ಸಮಿತಿ ಸಭೆಯನ್ನು ನಿಯತಕಾಲಿಕವಾಗಿ ನಡೆಸತಕ್ಕದ್ದು. ಸಭೆಯ ದಿನಾಂಕ ಮತ್ತು ಒಂದು ಸಭೆಯಿಂದ ಇನ್ನೊಂದು ಸಭೆಗೂ ಇರಬೇಕಾದ ಕಾಲಾವಧಿಯನ್ನು ರಾಜ್ಯ ಸರ್ಕಾರವು ಅಧಿಸೂಚಿಸತಕ್ಕದ್ದು. ಆದಾಗ್ಯೂ, ಒಂದು ತ್ರೈಮಾಸಿಕ ಅವಧಿಯಲ್ಲಿ ಕನಿಷ್ಠ ಒಂದಾದರೂ ಸಭೆ ಜರುಗತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಡಗಾವೆ ಬಸವರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.
(ಆಹಾರ–1 & 2)

ಪಿ.ಆರ್.ನಂ. 2667

## ಸಹಕಾರ ಸಚಿವಾಲಯ

**ವಿಷಯ :** ರಾಜ್ಯದ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ಶೇ.1 ರ ಬಡ್ಡಿ ದರದಲ್ಲಿ ನೀಡುವ ಸಾಲಕ್ಕೆ ಬಡ್ಡಿ ಸಹಾಯಧನ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಿಒ 129 ಸಿಎಲ್ಎಸ್ 2011, ದಿನಾಂಕ 11–05–2011.

2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಸಿಆರ್‌ಡಿ/ಸಿಎಬಿ–1/17/2011–12, ದಿನಾಂಕ 17–06–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ 2011–12ರ ಆಯವ್ಯಯ ಭಾಷಣ ಘೋಷಣೆ ಅನ್ವಯ ರಾಜ್ಯದ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ರೂ. 3.00 ಲಕ್ಷವರೆಗಿನ ಅಲ್ಪಾವಧಿ ಕೃಷಿ ಬೆಳೆ ಸಾಲಗಳನ್ನು ಶೇ.1ರ ಬಡ್ಡಿ ದರದಲ್ಲಿ ಒದಗಿಸುವ ಯೋಜನೆಯನ್ನು ದಿನಾಂಕ 01-04–2011 ರಿಂದ ಜಾರಿಗೆ ಬರುವಂತೆ ಕೆಲವು ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ. 2010–11 ನೇ ಸಾಲಿನಲ್ಲಿ ಶೇ.3 ರ ಬಡ್ಡಿ ದರದ ಯೋಜನೆಯಲ್ಲಿ ರಾಜ್ಯ ಸರ್ಕಾರದ ವತಿಯಿಂದ ಶೇ.7.75 ಸಹಾಯಧನ ನಿಗದಿಪಡಿಸಲಾಗಿದೆ. ಪ್ರಸ್ತುತ ಸದರಿ ಬಡ್ಡಿ ದರವನ್ನು ಶೇ.1 ಕ್ಕೆ ಇಳಿಸಿರುವುದರಿಂದ ಹಾಗೂ ಭಾರತೀಯ ರಿಸರ್ವ್ ಬ್ಯಾಂಕಿನ ಸಾಲಮಿತಿ ದರಗಳನ್ವಯ ರೆಪೋ ದರವು ನಿರಂತರವಾಗಿ ಏರಿಕೆಯಾಗುತ್ತಿದ್ದು, ಜೊತೆಗೆ ಬ್ಯಾಂಕುಗಳು ಸಂಗ್ರಹಿಸುವ ನಿಶ್ಚಿತ ಠೇವಣಿ ಮತ್ತು ಉಳಿತಾಯ ಖಾತೆಗಳ ಮೇಲಿನ ಠೇವಣಿಗಳಲ್ಲಿನ ಬಡ್ಡಿ ದರವು ತೀವ್ರಗತಿಯಲ್ಲಿ ಏರಿಕೆಯಾಗುತ್ತಿದೆ. ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ರಾಜ್ಯ ಸರ್ಕಾರವು ನೀಡಬೇಕಾದ ಬಡ್ಡಿ ಸಹಾಯಧನವನ್ನು ಶೇ. 10 ಕ್ಕೆ ನಿಗದಿಪಡಿಸುವಂತೆ ಸಹಕಾರ ಸಂಘಗಳ ನಿಬಂಧಕರು ಕೋರಿರುತ್ತಾರೆ. ಸರ್ಕಾರದಿಂದ ನೀಡುವ ಸಹಾಯಧನವನ್ನು ಶೇ. 9.75 ಕ್ಕೆ ನಿಗದಿಗೊಳಿಸಲು ನಿರ್ಣಯಿಸಲಾಗಿದೆ.

ಆದುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 245 ಸಿಎಲ್ಎಸ್ 2011, ಬೆಂಗಳೂರು, ದಿನಾಂಕ 04ನೇ ನವೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶೇ.1ರ ಬಡ್ಡಿ ದರದಲ್ಲಿ ಸಾಲ ನೀಡುವ ಯೋಜನೆಯಡಿಯಲ್ಲಿ 2011–12 ನೇ ಸಾಲಿನಲ್ಲಿ ವಿತರಿಸಿದ ಅಲ್ಪಾವಧಿ ಕೃಷಿ ಸಾಲಕ್ಕೆ ರಾಜ್ಯ ಸರ್ಕಾರದ ಸಹಾಯಧನವನ್ನು ಶೇ. 9.75 ಕ್ಕೆ ನಿಗದಿಗೊಳಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 396 ವೆಚ್ಚ–2/2011, ದಿನಾಂಕ 20–10–2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ನೂಲಿ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್.ನಂ. 2668

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ವಹೀದುಲ್ಲಾ ಖಾನ್, ಪ್ರಥಮ ದರ್ಜೆ ಸಹಾಯಕ, ಖಜಾನೆ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ :** ಅಪರ ನಿಬಂಧಕರು, ವಿಚಾರಣೆಗಳು-6, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ: ಕಂಪ್ಲೇಂಟ್/ಉಪಲೋಕ್/ಜಿಎಲ್‌ಬಿ-141/2011/ಎಆರ್‌ಇ-6, ದಿನಾಂಕ 3-10-2011 ಮತ್ತು ಸನ್ಮಾನ್ಯ ಉಪ ಲೋಕಾಯುಕ್ತರ ವರದಿ ದಿನಾಂಕ 30-9-2011.

**ಪ್ರಸ್ತಾವನೆ :**

ಅಪರ ನಿಬಂಧಕರು, (ವಿಚಾರಣೆಗಳು-6), ಕರ್ನಾಟಕ ಲೋಕಾಯುಕ್ತ ಇವರು ಮೇಲೆ ಓದಲಾದ ದಿನಾಂಕ 3-10-2011ರ ಪತ್ರದಲ್ಲಿ ಶ್ರೀ ವಹೀದುಲ್ಲಾ ಖಾನ್, ಪ್ರಥಮ ದರ್ಜೆ ಸಹಾಯಕ, ಖಜಾನೆ ಇಲಾಖೆ ಅವರ ವಿರುದ್ಧ ಸನ್ಮಾನ್ಯ ಉಪ ಲೋಕಾಯುಕ್ತರು ತನಿಖೆ ನಡೆಸಿ ಸಲ್ಲಿಸಿದ ದಿನಾಂಕ 30-9-2011ರ ವರದಿಯನ್ನು ಮುಂದಿನ ಕ್ರಮ ಕೈಗೊಳ್ಳಲು ಕಳುಹಿಸಿದ್ದಾರೆ. ಸದರೀ ವರದಿಯನ್ನು ಪರಿಶೀಲಿಸಲಾಗಿ, ಶ್ರೀ ವಹೀದುಲ್ಲಾ ಖಾನ್, ಪ್ರಥಮ ದರ್ಜೆ ಸಹಾಯಕ, ಖಜಾನೆ ಇಲಾಖೆ ಅವರು ತಾಲ್ಲೂಕು ಪಂಚಾಯತ್, ಸಿಂಧನೂರು, ರಾಯಚೂರು ಜಿಲ್ಲೆ ಇಲ್ಲಿ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದಾಗ ತಾಲ್ಲೂಕು ಪಂಚಾಯತ್ ಕಚೇರಿಗೆ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಿದ್ದಕ್ಕಾಗಿ ಬಾಕಿ ಉಳಿದಿರುವ ರೂ. 1,19,745/-ಗಳನ್ನು ಬಿಡುಗಡೆ ಮಾಡಲು ಇಳಕಲ್‌ನ ಮೆ॥ ಪ್ರಸನ್ನ ಆಫ್‌ಸೆಟ್ ಪ್ರಿಂಟರ್ಸ್ ಎಂಬುವವರಿಂದ ಅಕ್ರಮ ಸಂಭಾವನೆ ಪಡೆದಿದ್ದಕ್ಕಾಗಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಸಿ.ಸಿ.ಎ. ನಿಯಮ 14(ಎ) ರನ್ವಯ ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಬೇಕೆಂಬ ಶಿಫಾರಸ್ಸನ್ನು ಮಾಡಿದ್ದಾರೆ. ಸದರಿ ಪ್ರಸ್ತಾವನೆಗೆ ಲಗತ್ತಿಸಲಾದ ತನಿಖಾ ವರದಿ, ಸಾಕ್ಷಿಗಳ ಹೇಳಿಕೆ ಫೋಟೋ ಪ್ರತಿಗಳನ್ನು ಪರಿಶೀಲಿಸಲಾಗಿ, ರೂ.1,19,745/-ಗಳನ್ನು ಬಿಡುಗಡೆ ಮಾಡಬೇಕೆಂದು ಫಿರ್ಯಾದುದಾರ ಶ್ರೀ ಶಾಂತಕುಮಾರ್ ಅವರು ಆರೋಪಿ ಶ್ರೀ ವಹೀದುಲ್ಲಾ ಖಾನ್, ಪ್ರಥಮ ದರ್ಜೆ ಸಹಾಯಕ, ಖಜಾನೆ ಇಲಾಖೆ ನಿಯೋಜನೆ ಮೇರೆಗೆ ತಾಲ್ಲೂಕು ಪಂಚಾಯತ್ ಕಾರ್ಯಾಲಯ, ಸಿಂಧನೂರು ಅವರನ್ನು ಭೇಟಿಯಾಗಿ ಕೋರಿದ್ದಾರೆ. ಸದರಿ ಮೊತ್ತವನ್ನು ಬಿಡುಗಡೆ ಮಾಡಲು ರೂ.10,000/- ಲಂಚವನ್ನು ತಮ್ಮ ಪತ್ನಿ ಶ್ರೀಮತಿ ಜಹೀದಾ ಬೇಗಂ ಅವರ State Bank of Hyderabad, Gurumitkal ಶಾಖೆಯ ಉಳಿತಾಯ ಖಾತೆಗೆ ಜಮೆ ಮಾಡಿ ಸದರಿ ಚಲನ್‌ನ counter file ನ್ನು ತಂದು ಕೊಡುವಂತೆ ಕೇಳಿದ ಮೇರೆಗೆ ಸದರಿ ಮೊತ್ತ ಜಮೆ ಮಾಡಿ counter file ನ್ನು ದಿನಾಂಕ 18-6-2010 ರಂದು ಪಡೆಯುತ್ತಿದ್ದಾಗ ಲೋಕಾಯುಕ್ತ ಪೋಲಿಸರಿಗೆ ಸಿಕ್ಕಿಬಿದ್ದಿದ್ದಾರೆ. ಈ ಬಗ್ಗೆ ಸನ್ಮಾನ್ಯ ಉಪ ಲೋಕಾಯುಕ್ತರು ನಡೆಸಿದ ಪ್ರಾಥಮಿಕ ತನಿಖೆಯಲ್ಲಿ ಸದರಿ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಅವರ ವಿರುದ್ಧ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ವಿಷಯವನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 168 ಆಖಇ 2011, ಬೆಂಗಳೂರು, ದಿನಾಂಕ 31ನೇ ಅಕ್ಟೋಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ & ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ವಹೀದುಲ್ಲಾ ಖಾನ್, ಪ್ರಥಮ ದರ್ಜೆ ಸಹಾಯಕ, ಖಜಾನೆ ಇಲಾಖೆ ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರ ಮೂಲಕ ನಡೆಸಬೇಕೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

ಪಿ.ಆರ್.ನಂ. 2669

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಎಸ್. ಎ. ಹಿರೇಮಠ್, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ನೋಟೀಸ್ ಸಂಖ್ಯೆ : ಆಇ 258 ರಾಲೆಪ 2010 ದಿನಾಂಕ 19-5-2011.
2. ಶ್ರೀ ಎಸ್. ಎ. ಹಿರೇಮಠ್, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ಉತ್ತರ ದಿನಾಂಕ 19-7-2011.

**ಪ್ರಸ್ತಾವನೆ :**

ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ಬೆಳಗಾವಿ ಇಲ್ಲಿ ಹಣಕಾಸು ಅಧಿಕಾರಿಯಾಗಿ 2005 ರಿಂದ 2008ರ ಅವಧಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ವಿಶ್ವವಿದ್ಯಾನಿಲಯದ ನಿಧಿಯಿಂದ ರೂ.1.00 ಕೋಟಿಗಳ ಮೊತ್ತವನ್ನು ಸೆಳೆದು ಅದನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಖಾಸಗಿ ವ್ಯಕ್ತಿಯ ಖಾತೆಯಲ್ಲಿ ತೊಡಗಿಸುವ ಮೂಲಕ ವಿಶ್ವವಿದ್ಯಾಲಯಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ ಆರೋಪಕ್ಕಾಗಿ ಶ್ರೀ ಎಸ್. ಎ. ಹಿರೇಮಠ್, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರಿಗೆ ಸಿ.ಸಿ.ಎ. ನಿಯಮಗಳನ್ವಯ ಮೇಲೆ (1) ರಲ್ಲಿ ಓದಲಾದ ದಿನಾಂಕ 19-5-2011 ರ ನೋಟೀಸ್ ನೀಡುವ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸದರಿ ನೋಟೀಸ್‌ಗೆ ಆರೋಪಿತ ಅಧಿಕಾರಿ ಮೇಲೆ (2)ರಲ್ಲಿ ಓದಲಾದ ದಿನಾಂಕ 19-7-2011ರ ಉತ್ತರ ನೀಡಿ ಆರೋಪಗಳನ್ನು ನಿರಾಕರಿಸಿದ್ದಾರೆ. ಆದ್ದರಿಂದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆ ನಡೆಸಲು ತೀರ್ಮಾನಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 258 ರಾಲೆಪ 2010, ಬೆಂಗಳೂರು, ದಿನಾಂಕ 28ನೇ ಅಕ್ಟೋಬರ್ 2011**

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ & ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್. ಎ. ಹಿರೇಮಠ್, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ನ್ಯಾ. ಡಿ.ವಿ.ಶೇಟ್, ನಿವೃತ್ತ ನ್ಯಾಯಾಧೀಶರು, ಆದರ್ಶ, ಸೈದಾಪೂರ, ಧಾರವಾಡ ಅವರನ್ನು

ವಿಚಾರಣಾಧಿಕಾರಿಗಳನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸುತ್ತೋಲೆ ಸಂಖ್ಯೆ : ಸಿಆಸುಇ 26 ಸೇಇವಿ 2011, ದಿನಾಂಕ 26-7-2011 ರಲ್ಲಿ ನಿಗದಿಪಡಿಸಿರುವಂತೆ ಸಂಭಾವನೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ & ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಡಾ॥ ಎಸ್.ಎ. ಕೋರಿ, ಕುಲಸಚಿವರು, ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಅವರು ವಿಚಾರಣಾಧಿಕಾರಿಗಳನ್ನು ಕೂಡಲೇ ಸಂಪರ್ಕಿಸಿ ಈ ವಿಚಾರಣೆಗೆ ಪ್ರಕರಣವನ್ನು ಮಂಡಿಸಲು ಕ್ರಮ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

ಪಿ.ಆರ್.ನಂ. 2670

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮೆ: ವಿಕಾಟ್ ಸಾಗರ್ ಸಿಮೆಂಟ್ಸ್ ಪ್ರೈ. ಲಿ., ಹೈದರಾಬಾದ್, ಆಂಧ್ರಪ್ರದೇಶ ರವರು ಗುಲ್ಬರ್ಗಾ ಜಿಲ್ಲೆಯ ಚಿಂಚೋಳಿ ತಾ: ಚತ್ರಸಾಲ ಕರ್ಚಖೇಡ ಮತ್ತು ಬುರಗಪಲ್ಲಿ ಗ್ರಾಮಗಳಲ್ಲಿ ಹೊಸದಾಗಿ ಸ್ಥಾಪಿಸುತ್ತಿರುವ ಸಿಮೆಂಟ್ ಘಟಕಕ್ಕೆ 2006-11ರ ಕೈಗಾರಿಕಾ ನೀತಿ ಬದಲಾಗಿ 2009-14ರ ಕೈಗಾರಿಕಾ ನೀತಿಯನ್ವಯ ರಿಯಾಯಿತಿ ಹಾಗೂ ಪ್ರೋತ್ಸಾಹಗಳನ್ನು ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಸಿಐ 118 ಎಸ್‌ಪಿಐ 2008, ದಿನಾಂಕ : 29-04-2008.
2. ಸರ್ಕಾರಿ ಆದೇಶ ಸಂಖ್ಯೆ : ಸಿಐ 69 ಎಸ್‌ಪಿಐ 2009, ದಿನಾಂಕ : 11-08-2009.
3. ಸರ್ಕಾರಿ ಆದೇಶ ಸಂಖ್ಯೆ : ಸಿಐ 37 ಎಸ್‌ಪಿಐ 2010, ದಿನಾಂಕ : 17-02-2010.
4. ಘಟಕದವರ ಮನವಿ ಪತ್ರ ದಿನಾಂಕ : 06-11-2010 ಮತ್ತು 10-01-2011.
5. ದಿನಾಂಕ : 14-09-2011 ರಂದು ನಡೆದ 105ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿಯ ನಡವಳಿಗಳು.
6. ಜಂಟಿ ನಿರ್ದೇಶಕರು (ಕೈಗಾರಿಕಾಭಿವೃದ್ಧಿ) ರವರ ಪತ್ರ ಸಂಖ್ಯೆ : ಕೈಅ/ಇ2/ಪ್ರತೆವಿ/ವಿಸಾಸಿಲಿ/34/2010-11, ದಿನಾಂಕ : 14-10-2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ: ಸಾಗರ್ ಸಿಮೆಂಟ್ಸ್ ಪ್ರೈ. ಲಿ., ಹೈದರಾಬಾದ್, ಆಂಧ್ರಪ್ರದೇಶ ಇವರಿಗೆ 5.5 MTPA ಸಿಮೆಂಟ್ ಘಟಕ ಹಾಗೂ 60 MW ಸಾಮರ್ಥ್ಯದ ಉಷ್ಣೋದಕ ವಿದ್ಯುತ್ ಉತ್ಪಾದಕ ಘಟಕಗಳನ್ನು ಒಟ್ಟು ರೂ. 2400.00 ಕೋಟಿಗಳ ವೆಚ್ಚದಲ್ಲಿ ಸ್ಥಾಪಿಸಲು ಅನುಮೋದನೆ ನೀಡಲಾಗಿದ್ದು, ಈ ಆದೇಶದಲ್ಲಿ 2006-11ರ ಕೈಗಾರಿಕಾ ನೀತಿಯನ್ವಯ ರಿಯಾಯಿತಿ ಮತ್ತು ಪ್ರೋತ್ಸಾಹಗಳನ್ನು ನೀಡಲಾಗುವುದು ಎಂದು ನಮೂದಿಸಲಾಗಿದೆ. ನಂತರ ಉಲ್ಲೇಖ (2) ರಲ್ಲಿಯ ಸರ್ಕಾರಿ ಆದೇಶದ ಪ್ರಕಾರ ಕಂಪನಿಯ ಹೆಸರನ್ನು ಮೆ: ಸಾಗರ್ ಸಿಮೆಂಟ್ಸ್ ನಿಂದ ಮೆ: ವಿಕಾಟ್ ಸಾಗರ್ ಸಿಮೆಂಟ್ಸ್ ಪ್ರೈ. ಲಿ., ಎಂದು ಬದಲಾಯಿಸಲಾಗಿದೆ.

ಮೇಲೆ (3) ರಲ್ಲಿ ಓದಲಾದ ಆದೇಶದಲ್ಲಿ ಸದರಿ ಘಟಕದ ಉತ್ಪಾದನಾ ಸಾಮರ್ಥ್ಯವನ್ನು 5.5 MTPA ಯಿಂದ 8.25 MTPAಗೆ ಹಾಗೂ ಹೆಚ್ಚುವರಿ ಬಂಡವಾಳ ಹೂಡಿಕೆ ರೂ. 788 ಕೋಟಿಗೆ ಹೆಚ್ಚಿಸಿಕೊಳ್ಳಲು ಸರ್ಕಾರವು ಅನುಮತಿ ನೀಡಿರುತ್ತದೆ.

ಮೆ: ವಿಕಾಟ್ ಸಾಗರ್ ಸಿಮೆಂಟ್ಸ್ ಪ್ರೈ. ಲಿ., ರವರು ಮೇಲೆ (4)ರಲ್ಲಿ ಓದಲಾದ ಮನವಿಗಳನ್ನು ಸರ್ಕಾರಕ್ಕೆ ಸಲ್ಲಿಸಿ, ತಮ್ಮ ಸಿಮೆಂಟ್ ಉತ್ಪಾದನಾ ಘಟಕಕ್ಕೆ 2009-14ರ ನೀತಿಯನ್ವಯ ರಿಯಾಯಿತಿ ಪ್ರೋತ್ಸಾಹಗಳನ್ನು ನೀಡಬೇಕೆಂದು ಕೋರಿರುತ್ತಾರೆ. ಘಟಕದವರ ಕೋರಿಕೆಯ ಬಗ್ಗೆ ಕೂಲಂಕಷವಾಗಿ ಚರ್ಚಿಸಲು ವಿಷಯವನ್ನು 105ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿ ಸಭೆಯಲ್ಲಿ ಮಂಡಿಸಲಾಗಿರುತ್ತದೆ.

ಮೇಲೆ ಓದಲಾದ ನಡುವಳಿಯಲ್ಲಿ 105ನೇ ರಾಜ್ಯ ಮಟ್ಟದ ಸಮನ್ವಯ ಸಮಿತಿ ಸಭೆಯು ಈ ಪ್ರಸ್ತಾಪನೆ ಬಗ್ಗೆ ಚರ್ಚಿಸಿದ್ದು, 2009-14ನೇ ಕೈಗಾರಿಕಾ ನೀತಿಯಂತೆ ರಿಯಾಯಿತಿ/ಪ್ರೋತ್ಸಾಹಗಳನ್ನು ಸದರಿ ಘಟಕಕ್ಕೆ ನೀಡಬಹುದೆಂದು ತೀರ್ಮಾನಿಸಿರುತ್ತದೆ.

ಅದರಂತೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಸಮಗ್ರವಾಗಿ ಪರಿಶೀಲಿಸಿರುತ್ತದೆ.

ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸಿಐ 229 ಎಸ್‌ಪಿಐ 2011, ಬೆಂಗಳೂರು, ದಿನಾಂಕ : 31-10-2011**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಗುಲ್ಬರ್ಗಾ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನಲ್ಲಿ 8.5 MTPA ಸಾಮರ್ಥ್ಯದ ಸಿಮೆಂಟ್ ಉತ್ಪಾದಕ ಘಟಕ ಸ್ಥಾಪಿಸಲು ಮೆ: ವಿಕಾಟ್ ಸಾಗರ್ ಸಿಮೆಂಟ್ಸ್ ಪ್ರೈ. ಲಿ., ಇವರಿಗೆ 2006-11ರ ಕೈಗಾರಿಕಾ ನೀತಿಗೆ ಬದಲಾಗಿ 2009-14ರ ಕೈಗಾರಿಕಾ ನೀತಿಯಡಿ ರಿಯಾಯಿತಿ ಪ್ರೋತ್ಸಾಹಗಳನ್ನು ಮಂಜೂರು ಮಾಡಲು ಸರ್ಕಾರದ ಅನುಮತಿ ನೀಡಲಾಗಿದೆ.

ಈ ಅನುಮತಿಯು, ಸದರಿ ಘಟಕವು 2006-11ರ ಕೈಗಾರಿಕಾ ನೀತಿಯಂತೆ ದಿನಾಂಕ : 31-03-2009ರವರೆಗೆ ಪ್ರವೇಶ ತೆರಿಗೆ ವಿನಾಯಿತಿಯನ್ನು ಪಡೆದುಕೊಂಡಿದ್ದಲ್ಲಿ, ಅದನ್ನು ಹಿಂತಿರುಗಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ವಿ. ಶ್ರೀನಿವಾಸ ದೀಕ್ಷಿತ್**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 2719

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಯಾದಗಿರ್ ಜಿಲ್ಲೆ ಮತ್ತು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಯೋಇ 309 ಪಿಟಿಪಿ 94, ದಿನಾಂಕ : 07–08–1995.
2. ಭಾರತೀಯ ಜನತಾ ಪಾರ್ಟಿಯ ರಾಜ್ಯಾಧ್ಯಕ್ಷರ ಪತ್ರ ಸಂ:ಭಾಜಪ/ರಾಕಾ/ಸಾನಿ/315/2011 ದಿನಾಂಕ : 06–07–2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ : 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಯಾದಗಿರ್ ಜಿಲ್ಲೆಯ ಯಾದಗಿರ್, ಸುರಪುರ ಮತ್ತು ಶಹಪುರ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 89 ಯೋವಿವಿ 2011, ಬೆಂಗಳೂರು, ದಿನಾಂಕ : 02–11–2011**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅನುಬಂಧ–1ರಲ್ಲಿ ನಮೂದಿಸಿರುವಂತೆ ಸದಸ್ಯರುಗಳನ್ನು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ಚಿಕ್ಕರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ–1&2
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಅನುಬಂಧ–1

**ಯಾದಗಿರ್ ಜಿಲ್ಲೆ : ಯಾದಗಿರ್ ತಾಲ್ಲೂಕು**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1. | ಶ್ರೀ ಗಿರಿಧರ ರೆಡ್ಡಿ ಬಿನ್ ವೆಂಕಟರೆಡ್ಡಿ ಅನಪೂರ, ಯಾದಗಿರಿ ತಾಲ್ಲೂಕು ಮತ್ತು ಜಿಲ್ಲೆ | ಸಾಮಾನ್ಯ |
| 2. | ಶ್ರೀಮತಿ ಸುತೀಲಾಬಾಯಿ ಕೋಂ ರಾಮಲಿಂಗಪ್ಪ ಅಲ್ಲಿಪೂರ, ಯಾರಗೋಳ ಅಂಚೆ, ಯಾದಗಿರಿ ತಾಲ್ಲೂಕು ಮತ್ತು ಜಿಲ್ಲೆ | ಮಹಿಳೆ |
| 3. | ಶ್ರೀ ಪರ್ವತ ರೆಡ್ಡಿ ಬಿನ್ ರಾಮನಗೌಡ ಕಾಳೇಬೆಳೆಗುಂದಿ, ಯಾದಗಿರಿ ತಾಲ್ಲೂಕು ಮತ್ತು ಜಿಲ್ಲೆ | ಸಾಮಾನ್ಯ |
| 4. | ಶ್ರೀ ಲತೀಫ್ ಬಿನ್ ಅಬ್ದುಲ ನಬಿ ಮಪಾತ್, ಯಾದಗಿರಿ ತಾಲ್ಲೂಕು ಮತ್ತು ಜಿಲ್ಲೆ | ಅ.ಸಂ. |
| 5. | ಶ್ರೀ ಮಲ್ಲಿಕಾರ್ಜುನ ಕುರುಕುಂಬಳ ಅಂಬೇಡ್ಕರ್ ಕಾಲೋನಿ, ಯಾದಗಿರಿ | ಎಸ್.ಸಿ. |
| 6. | ಶ್ರೀ ರಮೇಶ್ ಕುಟಮನಿ ಕೋಲಿವಾಡಾ, ಯಾದಗಿರಿ | ಬಿ.ಸಿ.ಎಂ. |

**ಯಾದಗಿರ್ ಜಿಲ್ಲೆ : ಶಹಪೂರ ತಾಲ್ಲೂಕು**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1. | ಶ್ರೀ ಗುರುಸಿದ್ದಪ್ಪ ಗೌಡ ಬಿನ್ ಬಸನಗೌಡ ಪಾಟೀಲ ಸಾ: ರಬ್ಬನಹಳ್ಳಿ, ಶಹಪೂರ ತಾಲ್ಲೂಕು, ಯಾದಗಿರಿ ಜಿಲ್ಲೆ. | ಸಾಮಾನ್ಯ |
| 2. | ಶ್ರೀ ಚಾಂದ್‌ಪಾಷಾ ಬಿನ್ ಬಾಬು ಮೇಯಾ ತಾಶೆ ಸಾ: ಗೋಗಿಪೇಠ್, ಶಹಾಪೂರ ತಾಲ್ಲೂಕು, ಯಾದಗಿರಿ ಜಿಲ್ಲೆ | ಅ.ಸಂ. |
| 3. | ಶ್ರೀಮತಿ ಲಲಿತಾಬಾಯಿ ಕೋಂ. ಅಮರಪ್ಪ ಶಹಪೂರಕರ್ ಕೆಂಬಾವಿ ಅಂಚೆ, ಯಾದಗಿರಿ ಜಿಲ್ಲೆ | ಮಹಿಳೆ |
| 4. | ಶ್ರೀ ಕಲ್ಲಪ್ಪ ಭೀಮಪ್ಪ ಕಾನಾಪೂರಕರ್ ಸಾ:ದೂರನಹಳ್ಳಿ, ಶಹಪೂರ ತಾಲ್ಲೂಕು, ಯಾದಗಿರಿ ಜಿಲ್ಲೆ | ಸಾಮಾನ್ಯ |
| 5. | ಶ್ರೀ ಎಸ್.ಸಿ. ಮಲ್ಲಿಕಾರ್ಜುನ ಬಿನ್ ಮರಿಯಪ್ಪ ಸಾ:ಬೆಂಡೆಗಂಬ್ಳಿ, ಶಹಪೂರ ತಾಲ್ಲೂಕು, ಯಾದಗಿರಿ ಜಿಲ್ಲೆ. | ಎಸ್.ಸಿ. |
| 6. | ಶ್ರೀ ಸೈದಪ್ಪ ಬಿನ್ ಸಣ್ಣನಾಗಪ್ಪ ಶಹಪೂರ, | ಹಿಂ.ವ. |

**ಯಾದಗಿರ್ ಜಿಲ್ಲೆ : ಸುರಪೂರ ತಾಲ್ಲೂಕು**

| ಕ್ರ.ಸಂ. | ಹೆಸರು | ವರ್ಗ |
|---|---|---|
| 1. | ಶ್ರೀ ರಮೇಶ್ ಬಿನ್ ಶರಣಪ್ಪ ಕೊಳ್ಳಿ ಮುದನೂರು ಅಂಚೆ ಸುರಪೂರ ತಾಲ್ಲೂಕು, ಯಾದಗಿರಿ ಜಿಲ್ಲೆ. | ಸಾಮಾನ್ಯ |
| 2. | ಶ್ರೀ ಸೈಯದ್ ಅಬ್ದುಲ್ ಸಭಾನ ಸುರಪುರ ಅಂಚೆ, ಸುರಪೂರ ತಾಲ್ಲೂಕು, ಯಾದಗಿರಿ ಜಿಲ್ಲೆ | ಅ.ಸಂ. |
| 3. | ಶ್ರೀ ಸೋಮಲಿಂಗಪ್ಪ ಬಿನ್ ನಿಜಪ್ಪ ದೊರಿ, ಕೊಡೆಕಲ್ಲ ಅಂಚೆ, ಸುರಪೂರ ತಾಲ್ಲೂಕು, ಯಾದಗಿರಿ ಜಿಲ್ಲೆ | ಪ.ಪಂ |
| 4. | ಶ್ರೀ ಶಾಂತರಾಜ ಬಿನ್ ತಮ್ಮಣ್ಣ ಬಾರಿ ಸುರಪೂರ ತಾಲ್ಲೂಕು, ಯಾದಗಿರಿ ಜಿಲ್ಲೆ | ಸಾಮಾನ್ಯ |
| 5. | ಶ್ರೀಮತಿ ಶಾರದಾ ಕೋಂ, ಶೇಷಪ್ಪ ಸಜ್ಜನ, ಹುಣಸಗಿ ಸುರಪೂರ ತಾಲ್ಲೂಕು, ಯಾದಗಿರಿ ಜಿಲ್ಲೆ | ಮಹಿಳೆ |
| 6. | ಶ್ರೀ ರಾಯಪ್ಪ ಬಿನ್ ಜುಮ್ಮಣ್ಣ ಜೋಗಿನ್, ಕಾಮನಡಗಿ ಸುರಪೂರ ತಾಲ್ಲೂಕು, ಯಾದಗಿರಿ ಜಿಲ್ಲೆ | ಬಿ.ಸಿ.ಎಂ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ-1&2

ಪಿ.ಆರ್. 2720 ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕೇಂದ್ರಸ್ಥಾನ ಸಹಾಯಕರ ಹುದ್ದೆಯನ್ನು ಸ್ಥಳಾಂತರಿಸುವ ಕುರಿತು ಆದೇಶ.

**ಓದಲಾಗಿದೆ :** ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಪತ್ರ ಸಂಖ್ಯೆ : ಸಿಬ್ಬಂದಿ-1-42/11-12 ದಿನಾಂಕ : 26-07-2011 ಮತ್ತು 21-09-2011.

**ಪ್ರಸ್ತಾವನೆ :**

ಮೇಲೆ ಓದಲಾದ ನೋಂದಣಿ ಮಹಾಪರಿವೀಕ್ಷಕರು ಹಾಗೂ ಮುದ್ರಾಂಕಗಳ ಆಯುಕ್ತರವರ ಪತ್ರಗಳಲ್ಲಿ ಜಿಲ್ಲಾ ನೋಂದಣಿ ಕಛೇರಿ, ಜಯನಗರ, ಬೆಂಗಳೂರು ಹಾಗೂ ಜಿಲ್ಲಾ ನೋಂದಣಿ ಕಛೇರಿ, ಮಡಿಕೇರಿ ಕಛೇರಿಗಳ ವಾರ್ಷಿಕ ಗುರಿ ಹಾಗೂ ರಾಜಸ್ವ ವಸೂಲಾತಿಯ 2010-11 ಹಾಗೂ 2011-12ರ ವಿವರಗಳನ್ನು ಒದಗಿಸಿ, ಮಡಿಕೇರಿ ಜಿಲ್ಲಾ ನೋಂದಣಿ ಕಛೇರಿಯಲ್ಲಿ ಕೆಲಸದ ಒತ್ತಡ ಕಡಿಮೆ ಇರುವುದರಿಂದ ಜಿಲ್ಲಾ ನೋಂದಣಿ ಕಛೇರಿ, ಜಯನಗರ ವ್ಯಾಪ್ತಿಗೆ 9 ಉಪ ನೋಂದಣಾಧಿಕಾರಿಗಳ ಕಛೇರಿಗಳಿದ್ದು, ಇಲ್ಲಿ ಕೆಲಸದ ಒತ್ತಡ ಹೆಚ್ಚಾಗಿರುವುದರಿಂದ ಮತ್ತು ಕರ್ನಾಟಕ ಮುದ್ರಾಂಕ ಕಾಯ್ದೆ, 1957ರ ಕಲಂ 67 ಬಿ ರಡಿಯಲ್ಲಿ ಐಚ್ಛಿಕ ನೋಂದಣಿ ದಸ್ತಾವೇಜುಗಳ ತಪಾಸಣೆಯನ್ನು ಮಾಡಲು ಕೇಂದ್ರಸ್ಥಾನ ಸಹಾಯಕರ ಹುದ್ದೆ ಅವಶ್ಯಕವಾಗಿರುವುದರಿಂದ ಹಾಗೂ ಹೆಚ್ಚಿನ ರಾಜಸ್ವ ಸಂಗ್ರಹಣೆ ಆಗುತ್ತಿರುವುದರಿಂದ ಈ ಹುದ್ದೆಯನ್ನು ಸ್ಥಳಾಂತರಿಸಿದಲ್ಲಿ ತಪಾಸಣೆ ಕೈಗೊಂಡು ಹೆಚ್ಚಿನ ರಾಜಸ್ವ ಸಂಗ್ರಹಣೆ ಮಾಡುವುದಕ್ಕೆ ಅವಕಾಶವಿರುತ್ತದೆ ಎಂದು ತಿಳಿಸಿ, ಜಿಲ್ಲಾ ನೋಂದಣಿ ಕಛೇರಿ, ಮಡಿಕೇರಿ ಇಲ್ಲಿಗೆ ಮಂಜೂರಾಗಿರುವ ಕೇಂದ್ರಸ್ಥಾನ ಸಹಾಯಕರ ಹುದ್ದೆಯನ್ನು ಜಿಲ್ಲಾ ನೋಂದಣಿ ಕಛೇರಿ, ಜಯನಗರ, ಬೆಂಗಳೂರು ಇಲ್ಲಿಗೆ ಸ್ಥಳಾಂತರಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 110 ಮುನೋಸೇ(2) 2006 ದಿನಾಂಕ : 30-03-2007 (ಭಾಗ-2)ರಲ್ಲಿ ಮಡಿಕೇರಿ ಜಿಲ್ಲಾ ನೋಂದಣಿ ಕಛೇರಿಗೆ ಕೇಂದ್ರಸ್ಥಾನ ಸಹಾಯಕರ ಹುದ್ದೆ ಮಂಜೂರಾಗಿರುತ್ತದೆ.

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 37 ಮುನೋಸೇ(1) 2011, ಬೆಂಗಳೂರು, ದಿನಾಂಕ : 24-10-2011**

ಪ್ರಸ್ತಾವನೆಯನ್ನು ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರದ ರಾಜಸ್ವ ಹೆಚ್ಚಿಸುವ ದೃಷ್ಟಿಯಿಂದ ಹಾಗೂ ಸಾರ್ವಜನಿಕರಿಗೆ ಆಡಳಿತದ ಅನುಕೂಲ ಹೆಚ್ಚಿಸುವ ದೃಷ್ಟಿಯಿಂದ ಕೇಂದ್ರಸ್ಥಾನ ಸಹಾಯಕರ ಹುದ್ದೆಯನ್ನು ಈ ಕೆಳಕಂಡಂತೆ ಸ್ಥಳಾಂತರಿಸಿ ಆದೇಶಿಸಿದೆ.

| ಕ್ರ.ಸಂ. | ಕೇಂದ್ರಸ್ಥಾನ ಸಹಾಯಕರ ಹುದ್ದೆ ಮಂಜೂರಾಗಿದ್ದ ಜಿಲ್ಲಾ ನೋಂದಣಿ ಕಛೇರಿಯ ಹೆಸರು | ಸ್ಥಳಾಂತರ ಮಾಡಲಾಗಿರುವ ಕಛೇರಿಯ ಹೆಸರು |
|---|---|---|
| 1 | ಜಿಲ್ಲಾ ನೋಂದಣಿ ಕಛೇರಿ, ಮಡಿಕೇರಿ | ಜಿಲ್ಲಾ ನೋಂದಣಿ ಕಛೇರಿ, ಜಯನಗರ, ಬೆಂಗಳೂರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಕೆ. ರಾಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2721 ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಸಹಕಾರ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಸಇ 131 ಸಸಂನೋ 2011, ಬೆಂಗಳೂರು, ದಿನಾಂಕ : 08ನೇ ನವೆಂಬರ್ 2011**

ಸರ್ಕಾರದ ಆದೇಶ ಸಂಖ್ಯೆ : ಸಇ 131 ಸಸಂನೋ 2011 ದಿನಾಂಕ : 20–09–2011ರ ಆದೇಶ ಭಾಗದಲ್ಲಿನ ಖಂಡಿಕೆ–01 ರಲ್ಲಿ **"ಮಾತೋಶ್ರೀ ರಮಾಬಾಯಿ ಅಂಬೇಡ್ಕರ್ ಕನ್ಯಾ ಪದವಿ ಪೂರ್ವ ಕಾಲೇಜು, ಬೀದರ್"** ಎಂಬ ಪದಗಳ ಬದಲಾಗಿ **"ಆಲ್ ಇಂಡಿಯಾ ಬುದ್ಧಿಷ್ಠ ಎಜುಕೇಶನಲ್ ಸೊಸೈಟಿ, ಬೀದರ್"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್. 2722 ಸರ್ಕಾರದ ಅಧೀನ ಕಾರ್ಯದರ್ಶಿ–2, ಸಹಕಾರ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಸಿಆಸುಇ 01 ಇಮುವಿ 2011, ಬೆಂಗಳೂರು, ದಿನಾಂಕ : 21–10–2011**

ಶ್ರೀ ಬಿ. ಶಿವಶಂಕರ್, ಮುಖ್ಯ ಇಂಜಿನಿಯರ್, ಇವರ ವಿರುದ್ಧ ದಾಖಲಾದ ಅಕ್ರಮ ಆಸ್ತಿ ಹೊಂದಿರುವ ಪ್ರಕರಣದಲ್ಲಿ ಅಭಿಯೋಜನೆ ಮಂಜೂರಾತಿ ನೀಡಿ ಹೊರಡಿಸಲಾಗಿರುವ ಒಟ್ಟು 17 ಪುಟಗಳ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 01 ಇಮುವಿ 2011, ದಿನಾಂಕ : 15–10–2011ರ ಉಲ್ಲೇಖ ಹಾಗೂ ಪ್ರಸ್ತಾವನೆ ಭಾಗದಲ್ಲಿ ಮಾತ್ರ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

| ಕ್ರಮ ಸಂಖ್ಯೆ | ಆದೇಶದ ಪುಟ ಸಂಖ್ಯೆ ಹಾಗೂ ಸಾಲು | ಆದೇಶದಲ್ಲಿರುವಂತೆ | ತಿದ್ದಿ ಓದಿಕೊಳ್ಳತಕ್ಕದ್ದು |
|---|---|---|---|
| 1 | ಪುಟ ಸಂಖ್ಯೆ –1ರ, ಉಲ್ಲೇಖ (2)ರಲ್ಲಿ | ಉಲ್ಲೇಖ(2) ತನಿಖಾಧಿಕಾರಿವರ ವರದಿ ದಿನಾಂಕ : 02–09–2010 | ಉಲ್ಲೇಖ(2) ತನಿಖಾಧಿಕಾರಿವರ ವರದಿ ದಿನಾಂಕ : 24–09–2010 |
| 2 | ಪುಟ ಸಂಖ್ಯೆ –1, 2ನೇ ಸಾಲು | ದಿನಾಂಕ : 02–09–2010 | ದಿನಾಂಕ : 24–09–2010 |
| 3 | ಪುಟ ಸಂಖ್ಯೆ –1, 3ನೇ ಸಾಲು | ದಿನಾಂಕ : 29–11–2008 | ದಿನಾಂಕ : 20–11–2008 |
| 4 | ಪುಟ ಸಂಖ್ಯೆ –1, 4ನೇ ಸಾಲು | ರೂ. 1,32,84,776.00 | ರೂ. 1,32,84,776.90 |
| 5 | ಪುಟ ಸಂಖ್ಯೆ –1, 7ನೇ ಸಾಲು | ಒಟ್ಟು ರೂ. 52,83,865.39 | ಒಟ್ಟು ರೂ. 57,83,865.39 |
| 6 | ಪುಟ ಸಂಖ್ಯೆ –3, 3ನೇ ಸಾಲು | 12) ಪಿಲಿಪ್ಸ್ ಟು–ಇನ್–ಒನ್ ರೆಕಾರ್ಡರ್ ರೂ. 8,000 | ಈ ಐಟಂನ್ನು ತೆಗೆದು ಹಾಕಲಾಗಿದೆ |
| 7 | ಪುಟ ಸಂಖ್ಯೆ –16, 2ನೇ ಕಂಡಿಕೆಯ 3ನೇ ಸಾಲು | ಶೇಕಡ 305.33% | ಶೇಕಡ 304.33% |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್.ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. ನಂ. 2723 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಒಳಾಡಳಿತ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ : ಒಇ 132 ಪಿಪಿಇ 2011, ಬೆಂಗಳೂರು, ದಿನಾಂಕ : 08–11–2011**

ಸರ್ಕಾರದ ಅಧಿಸೂಚನೆ ಸಂಖ್ಯೆ : ಒಇ 132 ಪಿಪಿಇ 2011, ದಿನಾಂಕ : 04–11–2011ರ ತಃಖ್ತೆಯ ಕ್ರ.ಸಂ. 42ರ ಅಂಕಣ (3)ರಲ್ಲಿ "ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ.ನ್ಯಾಯಾಲಯ, ಮಂಡಿಕೇರಿ (ಖಾಲಿ ಹುದ್ದೆ)" ಎಂಬುದರ ಬದಲಾಗಿ "ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಮಂಗಳೂರು (ಶ್ರೀ ಕೆ.ಪುಷ್ಪರಾಜ್ ಇವರ ಬಡ್ತಿ/ವರ್ಗಾವಣೆಯಿಂದ ತೆರವಾದ ಹುದ್ದೆಗೆ)" ಎಂದು ಕ್ರ.ಸಂ.61ರ ಅಂಕಣ (3)ರಲ್ಲಿ "ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಮಂಗಳೂರು (ಶ್ರೀ ಕೆ.ಪುಷ್ಪರಾಜ್ ಇವರ ಬಡ್ತಿ/ವರ್ಗಾವಣೆಯಿಂದ ತೆರವಾದ ಹುದ್ದೆಗೆ) ಎಂಬುದರ ಬದಲಾಗಿ "ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಮಡಿಕೇರಿ (ಖಾಲಿ ಹುದ್ದೆ)" ಎಂಬುದಾಗಿ ಮತ್ತು ಕ್ರ.ಸಂಖ್ಯೆ : 30ರ ಅಂಕಣ (2)ರಲ್ಲಿ "ಬಷೀರ್ ಅಹಮದ್ ಇಬ್ರಾಹಿಂ ಮಕಾಂದಾರ್, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ರಾಯಚೂರು (ಸ್ವತಂತ್ರ ಪ್ರಭಾರ)" ಎಂಬುದರ ಬದಲಾಗಿ "ಬಷೀರ್ ಅಹಮದ್ ಇಬ್ರಾಹಿಂ ಮಕಾಂದಾರ್, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಹುಬ್ಬಳ್ಳಿ–ಧಾರವಾಡ' ಎಂಬುದಾಗಿ ಅಂಕಣ (3)ರಲ್ಲಿ "ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷಕರ ಕಛೇರಿ, ರಾಯಚೂರು" ಎಂಬುದರ ಬದಲಾಗಿ "ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಹುಬ್ಬಳ್ಳಿ–ಧಾರವಾಡ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು.

ಉಳಿದಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ : ಒಇ 132 ಪಿಪಿಇ 2011, ದಿನಾಂಕ : 04–11–2011 ಮತ್ತು ತಿದ್ದುಪಡಿ ಆದೇಶ ಸಂಖ್ಯೆ : ಒಇ 132 ಪಿಪಿಇ 2011, ದಿನಾಂಕ : 04–11–2011ರಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ನಿಂಗಪ್ಪ**

ಪಿ.ಆರ್. ನಂ. 2724 ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ)